# ಅನನ್ಯ
# ಅಭಿವ್ಯಕ್ತಿ

ಸಂಪುಟ - 2 ಸಂಚಿಕೆ - 8 ಮಾರ್ಚ್ - 2000



ಅರಿಯಕ್ಕುಡಿ ರಾಮಾನುಜ ಅಯ್ಯಂಗಾರ್

## ಈ ಸಂಚಿಕೆಯಲ್ಲಿ

# ಅರಿಕೆ

'ಅನನ್ಯ ಅಭಿವ್ಯಕ್ತಿ' ಸಂಗೀತದ ಬಗ್ಗೆ ಲೇಖನಗಳನ್ನು ಪ್ರಕಟಿಸುವುದರೊಂದಿಗೆ, ಬೆಂಗಳೂರಿನ ಎಲ್ಲ ಸಂಗೀತ ಸಂಘ ಸಂಸ್ಥೆಗಳ ಮುಖವಾಣಿಯೂ ಆಗಬೇಕೆಂಬುದು ಅನನ್ಯದ ಆಶಯಗಳಲ್ಲಿ ಒಂದು. ಸಂಗೀತ ಶಾಸ್ತ್ರದ ಬಗ್ಗೆ ತಿಳುವಳಿಕೆ ಮೂಡಿಸುವುದು, ಹಿರಿಯ ಕಲಾವಿದರ ಸಂದರ್ಶನಗಳನ್ನು ಪ್ರಕಟಿಸುವುದು, ಒಂದು ಸಂಗೀತ ಪತ್ರಿಕೆಗೆ ಹೇಗೆ ಮುಖ್ಯವೋ, ಸಂಗೀತ ಪ್ರಸಾರಕ್ಕಾಗಿ ಸಂಘ ಸಂಸ್ಥೆಗಳು ಮಾಡುತ್ತಿರುವ ಕೆಲಸಗಳನ್ನು ದಾಖಲಿಸುವುದೂ ಅಷ್ಟೇ ಮುಖ್ಯವೇ ಹೊರತು ಇದು ಜಾಹೀರಾತಲ್ಲ.

ಯಾವುದೇ ಪತ್ರಿಕೆಗೆ ತಾನು ಹಮ್ಮಿಕೊಂಡ ಕ್ಷೇತ್ರದ ಸತ್ವಪೂರ್ಣ ಬರಹಗಳಷ್ಟೇ ಮುಖ್ಯ ಗುರಿಯಾಗದೆ, ಆ ಕ್ಷೇತ್ರದ ಸಮಸ್ತರನ್ನು ತಲುಪುವುದೂ ಸಹ ಮುಖ್ಯ ಗುರಿಯೇ ಆಗಬೇಕಾಗುತ್ತದೆ. ಯುವ ಕಲಾವಿದರನ್ನು ಪ್ರೋತ್ಸಾಹಿಸುವುದು, ಚಿಕ್ಕ ಪುಟ್ಟ ಸಂಘ ಸಂಸ್ಥೆಗಳಿಗೆ ಒತ್ತಾಸೆಯಾಗಿ ನಿಲ್ಲುವುದೂ ಒಂದು ಪತ್ರಿಕೆಯಿಂದ ಸಾಧ್ಯವಿದೆ. ದೊಡ್ಡ ದೊಡ್ಡ ಪತ್ರಿಕೆಗಳಿಗೆ ತನ್ನ ಕಾರ್ಯಭಾರದ ಹರಹು ಅತಿ ವಿಸ್ತಾರವಾಗಿ, ಅದರ ಗುರಿಗಳೂ ಬೇರೆಯೇ ಆಗುವುದರಿಂದ, ದಿನಪತ್ರಿಕೆ ಅಥವಾ ನಿಯತಕಾಹಿಕೆಗಳಲ್ಲಿ ಲಲಿತ ಕಲೆಗಳ ಬಗ್ಗೆ, ಅದರಲ್ಲೂ ಸಂಗೀತ ಕ್ಷೇತ್ರದ ಆಗು ಹೋಗುಗಳ ಬಗ್ಗೆ ವಿವರಗಳನ್ನು ನಿರೀಕ್ಷಿಸುವುದು ಸಾಧ್ಯವಿಲ್ಲ. ಇಂದಿನ ಪತ್ರಿಕಾ ಪ್ರಪಂಚದಲ್ಲಂತೂ ಇದು ಮರೀಚಿಕೆಯೇ ಆಗಿದೆ. ಇಂತಹುದರಲ್ಲಿ 'ಅನನ್ಯ ಅಭಿವ್ಯಕ್ತಿ' ಯಂಥ ಸಣ್ಣ ಪತ್ರಿಕೆಗಳಿಗೆ ಪ್ರಾರಂಭಿಕ ಹಂತದ ಕೆಲಸಗಳನ್ನು ಮಾಡುವುದು ಅನಿವಾರ್ಯವೂ, ಅವಶ್ಯಕವೂ ಮತ್ತು ಜವಾಬ್ದಾರಿಯೂ ಆಗುತ್ತದೆ.

ನಮ್ಮ ಈ ಪುಟ್ಟ ಪತ್ರಿಕೆ ಎಲ್ಲಕ್ಕೂ ವೇದಿಕೆಯಾಗಬೇಕು. ಆರೋಗ್ಯಕರ ಚರ್ಚೆ ಸಹ ಇದರಲ್ಲಿ ಇಂಬುಗೊಳ್ಳಬೇಕು. ಹಿರಿಯರಿಗೂ, ಕಿರಿಯರಿಗೂ ಒಟ್ಟಿನಲ್ಲಿ ಸಂಗೀತ ಕ್ಷೇತ್ರಕ್ಕೆ ಸಂಬಂಧ ಪಟ್ಟ ಎಲ್ಲರಿಗೂ ಈ ಪತ್ರಿಕೆ 'ನಮ್ಮದು' ಎನಿಸಬೇಕು. ಆಗಷ್ಟೇ ಇಂಥ ಪುಟ್ಟ ಪತ್ರಿಕೆಗಳು ಹುಟ್ಟಿದ್ದಕ್ಕೂ ಸಾರ್ಥಕವಾಗುತ್ತದೆ.

ಸಂಘ ಸಂಸ್ಥೆಗಳಿಗೆ ಒಂದು ಮನವಿ. ನಿಮ್ಮ ತಿಂಗಳ ಕಾರ್ಯಕ್ರಮದ ವಿವರಗಳನ್ನು ಆಯಾ ತಿಂಗಳ ೨೦ನೇ ತಾರೀಖಿನೊಳಗೆ ದಯವಿಟ್ಟು ತಲುಪಿಸಿ ಮತ್ತು ಕಾರ್ಯಕ್ರಮ ನಡೆದ ನಂತರ ಚಿಕ್ಕದಾದ ವರದಿಗೂ ಆಹ್ವಾನವಿದೆ.

## ಮುಖಪುಟ : ಅರಿಯಕ್ಕುಡಿ ರಾಮಾನುಜ ಅಯ್ಯಂಗಾರ್ (1890–1967)

**ಚಿತ್ರ–ಬರಹ : ಪ್ರೊ. ಎಸ್. ಕೆ. ರಾಮಚಂದ್ರ ರಾವ್.**

ಸಂಪ್ರದಾಯಸಂಗೀತದ ಪ್ರಸ್ತುತಯುಗದಲ್ಲಿ ನಿಸ್ಸೀಮರಾಗಿ ಮೆರೆದವರು, ಸಭಾವಿನಿಕೆಯ ಪದ್ಧತಿಗೆ ಪ್ರವರ್ತಕರು, ಪ್ರಮಾಣ ಪುರುಷರು. ಅರ್ಧಶತಮಾನಕ್ಕೂ ಮೀರಿದ ಕೊಡುಗೆ ಅವರದ್ದು. ಪುದುಕ್ಕೋಟೆ ಮಲಯಪ್ಪಯ್ಯರ್, ಪಲ್ಲವಿ ನಾಮಕ್ಕಲ್ ನರಸಿಂಹಯ್ಯಂಗಾರ್, ರಾಮನಾಥ್ ಶ್ರೀನಿವಾಸಯ್ಯಂಗಾರ್ ಇವರಲ್ಲಿ ಶಿಕ್ಷಣ. ತ್ಯಾಗರಾಜ ಶಿಷ್ಯಪರಂಪರೆಗೆ ಸೇರಿದವರಲ್ಲಿ ಅಗ್ರಗಣ್ಯರು. ಸಂಪ್ರದಾಯ ಶೀಲರು, ಆದರೆ ಪ್ರಯೋಗಕುತೂಹಲಿಗಳು; ಪಂಡಿತ ಪಾಮರ ರಂಜನೆಯನ್ನೆ ಪ್ರವೃತ್ತಿಯಾಗಿ ಇರಿಸಿಕೊಂಡಿದ್ದವರು. ಸರ್ವಾಂಗೀಣವಾಗಿ ಶುದ್ಧವಾದ, ಪ್ರಗಲ್ಭವಾದ, ರೋಚಕವಾದ ಸಂಗೀತ ಅವರದ್ದು. ಹಿತ-ಮಿತ ಇವೆರಡೂ ಅವರಿಗೆ ಅಚ್ಚು ಮೆಚ್ಚು. ಗೋದಾದೇವಿಯ 'ತಿರುಪ್ಪಾವೈ' ಎಂಬ ತಮಿಳು ಪಾಶುರಗಳಿಗೆ ಸ್ವರ ಸಂಯೋಜನೆ ಮಾಡಿದರು; ಅರುಣಾಚಲ ಕವಿರಾಯರ ಗೇಯನಾಟಕವಾದ 'ರಾಮನಾಟಕ'ಕ್ಕೂ ಸ್ವರ ಸಂಯೋಜನೆ ಮಾಡಿ ಅದನ್ನು ಬೆಳಕಿಗೆ ತಂದರು. 'ಸಂಗೀತ-ಕಲಾನಿಧಿ' (1939) ಯಾದರು; ರಾಷ್ಟ್ರಪ್ರಶಸ್ತಿಯನ್ನು ಪಡೆದರು (1958). ಶಿಷ್ಯರಲ್ಲಿ ಪಾಲಕ್ಕಾಡು ನಾರಾಯಣಸ್ವಾಮಿ, ಮಧುರೆ ಕೃಷ್ಣನ್, ರಾಜಂ ಅಯ್ಯರ್ ಸೇರುತ್ತಾರೆ. ಅವರಿಂದ ಪ್ರಭಾವಿತರಾದ ಗಾಯಕರು ನೂರಾರು ಮಂದಿ; ಜಿ. ಎನ್. ಬಾಲಸುಬ್ರಹ್ಮಣ್ಯಂ, ಪಾಲಕ್ಕಾಡು ಮಣಿ ಅಯ್ಯರ್, ಲಾಲ್ಗುಡಿ ಜಯರಾಮನ್ ಮೊದಲಾದವರು.

**ಅಧ್ಯಕ್ಷರು : ಡಾ|| ಯು. ಆರ್. ಅನಂತಮೂರ್ತಿ**

**ಪ್ರಧಾನ ಸಂಪಾದಕರು : ಬಿ.ವಿ.ಕೆ. ಶಾಸ್ತ್ರೀ** **ವ್ಯವಸ್ಥಾಪಕ ಸಂಪಾದಕರು : ಡಾ|| ಆರ್. ವಿ. ರಾಘವೇಂದ್ರ**

## ಗ್ರಂಥ ಪರಿಚಯ



# ಭರತಮುನಿಯ ನಾಟ್ಯಶಾಸ್ತ್ರ - ೧೯

## ಸಂಪ್ರದಾಯಕಲೆಯ ಚೌಕಟ್ಟು

**ಪ್ರೊ॥ ಸಾ. ಕೃ. ರಾಮಚಂದ್ರರಾವ್**

ಭರತಮುನಿ ನಾಟ್ಯಶಾಸ್ತ್ರವನ್ನು ರಚಿಸಿದ್ದೇಕೆ ಎನ್ನುವ ವಿಚಾರವಾಗಿ, ಅವನ ವ್ಯಾಖ್ಯಾನಕಾರರಲ್ಲಿ ಅಗ್ರಗಣ್ಯನಾದ ಅಭಿನವಗುಪ್ತನು ಕವಿಯ ಮತ್ತು ನಟನ ಶಿಕ್ಷಣಕ್ಕಾಗಿ ಎಂದು ಸೂಚಿಸುತ್ತಾನೆ ('ಕವಿನಟಶಿಕ್ಷಾರ್ಥಂ ಏವ ಸರ್ವಮಿದಂ ಪ್ರಕರಣಂ', ಮತ್ತು 'ಕವಿಪ್ರಯೋಕ್ತ್ರೋರುಪದೇಶಪರಂ ಶಾಸ್ತ್ರ'). ನಾಟ್ಯವೆನ್ನುವುದೊಂದು ಶಾಸ್ತ್ರ; ಅದರಲ್ಲಿ ಕವಿಯದೊಂದು ಪಾಲು, ಅದನ್ನು ಪ್ರಯೋಗಕ್ಕೆ ಅಳವಡಿಸುವವನದ್ದು ಇನ್ನೊಂದು ಪಾಲು (ಇವನೇ ಪ್ರಯೋಕ್ತೃ ಅಥವಾ ನಟ). ಹಿಂದೆ ಹೇಳಿದಂತೆ, ಭರತನ ದೃಷ್ಟಿಯಲ್ಲಿ ಕವಿ ಮತ್ತು ನಟ ಎರಡೂ ವಿಶಾಲಾರ್ಥವನ್ನು ಹೊಂದಿರುವ ಮಾತುಗಳು.

ಕಣ್ಣಿಗೆ ಕಾಣುವ ಪ್ರಸಂಗಗಳಲ್ಲಿ, ಕಣ್ಣಿಗೆ ಕಾಣದೇ ಇದ್ದರೂ ಅಡಗಿದ್ದು ತನ್ನ ಪ್ರಭಾವವನ್ನು ಒಡಮೂಡಿಸುವ ದ್ರವ್ಯವನ್ನು ಕಂಡುಕೊಳ್ಳುವವನು ಕವಿ (ಕ್ರಾಂತದರ್ಶಿ); ಅವನು ತನ್ನ ಪ್ರತಿಭೆಯಿಂದ ವ್ಯವಹಾರದಾಚೆ ಇರುವ ಪರಮಾರ್ಥವನ್ನು ಗುರುತಿಸಿಕೊಳ್ಳಬಲ್ಲ, ಇತರರಿಗೆ ತಿಳಿಸಿಕೊಡಬಲ್ಲ. ಹೀಗೆ ದರ್ಶನ ಶಕ್ತಿ ಮತ್ತು ವರ್ಣನಾಶಕ್ತಿ ಇರುವವನೇ ಕವಿ. ಅವನ ಕ್ಷೇತ್ರ ಯಾವುದಾದರಿರಲಿ, ಸಾಹಿತ್ಯವೋ ಸಂಗೀತವೋ ನೃತ್ಯವೋ, ನಾಟಕವೋ ಏನಾದರಾಗಲಿ ಅವನು ಕವಿಯೇ. ಅವನ ಕಾಣ್ಕೆ ಇಲ್ಲಿ ಕೆಲಸಮಾಡುತ್ತದೆ.

ಇನ್ನು ನಟನೆಂದರೆ ಕವಿಯ ಆಶಯವನ್ನು ತಾನು ಗ್ರಹಿಸಿ ಅದನ್ನು ಇತರ ರಸಿಕರಿಗೆ ಅಥವಾ ಸಹೃದಯರಿಗೆ ಮನವರಿಕೆ ಮಾಡಿಕೊಡುವ ಶಕ್ತಿಯುಳ್ಳವನು. ಇಲ್ಲಿಯೂ ಕ್ಷೇತ್ರ, ಸಂಗೀತವೋ, ಸಾಹಿತ್ಯವೋ, ನಾಟ್ಯವೋ, ನಾಟಕವೋ ಯಾವುದಾದರಿರಲಿ ಅವನು ನಟನೇ. ನಾಟಕದಲ್ಲಿ ನಟನು ಬೇರೊಬ್ಬ ವ್ಯಕ್ತಿಯ, ನಾಯಕನ, ಪಾತ್ರವನ್ನು ವಹಿಸಿ, ಅವನ ಗರಿಮೆಯನ್ನೊ, ಸ್ವಾರಸ್ಯವನ್ನೊ ನೆರೆದವರೆದುರು ತೋರಿಸುವಂತಯೇ ಸಂಗೀತಗಾರನೂ ತ್ಯಾಗರಾಜರ, ದೀಕ್ಷಿತರ ಮತ್ತಿತರ ವಾಗ್ಗೇಯಕಾರರ ಕೃತಿಗಳನ್ನೋ ಪ್ರಬಂಧಗಳನ್ನೋ ವಿನಿಕೆಮಾಡುವಾಗ ಆಯಾ ಹಿರಿಯರ ಪಾತ್ರವನ್ನು ವಹಿಸಬೇಕು; ಹಾಗೆ ತನಗೇ ಒಂದು ತನ್ಮಯತೆಯಿರದಿದ್ದರೆ ಸಮರ್ಥವಾದ ರಸಸಂಕ್ರಮಣ ಆಗಲಾರದು. ಕೃತಿಯನ್ನು ಮಾತ್ರ ಅನುಭವಿಸಿದರೆ ಸಾಲದು, ಕೃತಿಯ ಹಿನ್ನಲೆಯಲ್ಲಿರುವ ವ್ಯಕ್ತಿಯ ವೈಶಿಷ್ಟ್ಯ, ಸಂದರ್ಭದ ಸ್ವಾರಸ್ಯ, ಮನೋವೃತ್ತಿಯ ಸೊಬಗು, ಕಲ್ಪನೆಯ ಕಾವು ಇವೆಲ್ಲವನ್ನೂ ಸಂಗೀತಗಾರನು ಅನುಭವಿಸಿ ಹಾಡಿದಾಗಲೇ ಅದು ರಸಮಯವಾದೀತು. ಇಲ್ಲವಾದರೆ 'ಡಂಭಕದ ಕೂಗಾಟ', ದಾಸರು ಹೇಳಿದಂತೆ.

ಹೀಗೆ ಯಾವುದೇ ಕಲಾಕ್ಷೇತ್ರವಾಗಲಿ ಕವಿ-ನಟ ಇಬ್ಬರೂ ಇರಬೇಕಾದುದೇ. ಕವಿಯ ಪ್ರತಿಭೆ ನಟನ ಮೂಲಕವೇ ಸಹೃದಯರನ್ನು ಮುಟ್ಟಬೇಕು; ನಟನು ತನ್ನ ಪ್ರತಿಭೆಗೆ ಕವಿಯನ್ನೇ ಅವಲಂಭಿಸಬೇಕು. ಮೂಲದ್ರವ್ಯವನ್ನು ಒದಗಿಸುವವನು ಕವಿ; ಅದನ್ನು ಪರಿಕ್ರಮಿಸುವವನು ನಟ. ಕವಿಯ ಕೆಲಸ ಕಾವ್ಯವಾದರೆ ನಟನ ಕೆಲಸ ನಾಟ್ಯ. ಇಬ್ಬರಿಗೂ ಸಮನಾಗಿಯೇ ಇರಬೇಕಾದ ಸಂಪತ್ತು ರಸವೆಂದು ಭರತಮುನಿ ಎಣಿಕೆ. ರಸವು ನಟನಲ್ಲಿ ಹೇಗೆ ಕೆಲಸಮಾಡುತ್ತದೆ, ಮಾಡಬೇಕು ಎಂದು ತಿಳಿಯ ಹೇಳುವುದೇ ನಾಟ್ಯಶಾಸ್ತ್ರದ ಚೌಕಟ್ಟು. ಕವಿಯ ವಿಚಾರವಾಗಿ ಭರತಮುನಿ ಹೆಚ್ಚು ಪ್ರಸ್ತಾಪಿಸುವುದಿಲ್ಲ. ರುದ್ರಭಟ್ಟನು 'ಶೃಂಗಾರ ತಿಲಕ' ದಲ್ಲಿ (೧, ೫) ಹೇಳುವುದರ ಹಿನ್ನಲೆ ಇದೇ -

> ಪ್ರಾಯೋ ನಾಟ್ಯಂ ಪ್ರತಿ ಪ್ರೋಕ್ತಾ ಭರತಾದ್ಯೈಃ ರಸಸ್ಥಿತಿಃ।
> ಯಥಾಮತಿ ಮಯಾಪ್ಯೇಷಾ ಕಾವ್ಯಂ ಪ್ರತಿ ನಿಗದ್ಯತೇ॥

ನಾಟ್ಯದಲ್ಲಿ (ಎಂದರೆ ನಟನಲ್ಲಿ) ರಸಾನುಭವ, ರಸಾಭಿವ್ಯಕ್ತಿ, ರಸಾಭಿನಯ ಯಾವ ರೀತಿ ಇರಬೇಕೆಂದು ಭರತನೂ ಇತರರೂ (ಶಂಕುಕ, ಲೊಲ್ಲಟ, ಭಟ್ಟತೌತ, ಅಭಿನವಗುಪ್ತ ಮೊದಲಾದವರು) ಹೇಳಿದ್ದಾರೆ. ಈ ರಸಸ್ಥಿತಿಯ ಅನ್ವಯವನ್ನೆ ತಾನು ಕಾವ್ಯಕ್ಕೆ (ಎಂದರೆ ಕವಿಗೆ) ಮಾಡುವುದಾಗಿ ರುದ್ರಭಟ್ಟನ ಪ್ರತಿಜ್ಞೆ. ಈ ಮಾತಿನಿಂದ ಸ್ಪಷ್ಟವಾಗುವುದು ಭರತಮುನಿಯ ಶಾಸ್ತ್ರಗ್ರಂಥವು ನಾಟ್ಯಕ್ಕೇ ಮೀಸಲಾಗಿದೆಯೆಂಬುದು, ಮತ್ತು ನಾಟ್ಯದ ಮುಖ್ಯ ವಿವರವೇ ರಸವೆಂಬುದು. ರಸದ ವಿಚಾರವಾಗಿ ಈ ಮೊದಲು ವಿಶೇಷವಾಗಿ ಚರ್ಚೆ ಮೂಡಿರುವುದು ಈ ದೃಷ್ಟಿಯಿಂದಲೇ.

ಭರತಮುನಿಯ 'ನ ಹಿ ರಸಾದೃತೇ ಕಶ್ಚಿದರ್ಥಃ ಪ್ರವರ್ತತೇ' (ಎಂದರೆ, ರಸವನ್ನು ಬಿಟ್ಟು ಮತ್ತೊಂದು ಮುಖ್ಯ ವಿಚಾರವೇ ಇಲ್ಲಿರದು) ಎಂಬ ಮಾತನ್ನು (೬, ೨೧) ಗಮನಿಸಬೇಕು. ಹಾಗಿರುವುದರಿಂದಲೇ ಇದರ ರಸಾಧ್ಯಾಯದಲ್ಲಿ 'ಅತ್ರಾರ್ಯೇ ರಸವಿಚಾರಮುಖೇ' (೬, ೬೭) ಎಂಬ ಒಕ್ಕಣೆಯಿಂದ. 'ರಸವಿಚಾರ' ವೆಂಬುದು ಅಧ್ಯಯನದ ಮೊದಲಲ್ಲೇ ಬರಬೇಕೆಂದು ತಿಳಿಸಿದ್ದಾನೆ; ಅಥವಾ ರಸವಿಚಾರವೆಂಬ ಪುಸ್ತಕವೊಂದೂ ಭರತನೆದುರು ಇದ್ದಿರಬಹುದು. ಭರತನಿಗೆ ಮೊದಲೇ ರಸವಿಚಾರವು ಬೆಳೆದಿದ್ದಿತೆನ್ನುವುದು ಇಂಗಿತ.

ರಸಸಿದ್ಧಾಂತವು ಹಾಗೆ ಭರತಮುನಿಗೆ ಮೊದಲೇ ಒಂದು ನಿರ್ದಿಷ್ಟ ನೆಲೆಯನ್ನು ಮುಟ್ಟಿದ್ದಿತೆಂದರೆ ಭರತಮುನಿಯು ಅದನ್ನು ಮತ್ತೆ ಎತ್ತಿಕೊಂಡದ್ದು ಏಕೆ? ಬರಿಯ 'ಚರ್ವಿತ ಚರ್ವಣ' ಅವನ ಉದ್ದೇಶವಾಗಿದಿದ್ದಿತೆ? ಈ ಸಂದರ್ಭದಲ್ಲಿ ಅಭಿನವಗುಪ್ತನು ತನಗೆ ತಾನೇ ಹೇಳಿಕೊಂಡಿರುವ ಮಾತುಗಳನ್ನು ನಾವು ಮನನ ಮಾಡಬೇಕು. ಕವಿಗೂ ನಟನಿಗೂ ಸಮನಾಗಿಯೇ ಈ ಮಾತುಗಳ ಪ್ರಯೋಜನವಿದೆ. ಅಭಿನವಗುಪ್ತನಾಗಲಿ ನಾಟ್ಯಶಾಸ್ತ್ರದ ರಸಾಧ್ಯಾಯದಲ್ಲೇ ಈ ಮಾತುಗಳನ್ನು ಸೇರಿಸಿರುವುದರ ಕಾರಣವೂ ಇದೇ. ಈ ಮಾತುಗಳು ಮೂಲದಲ್ಲೇ ಸೊಗಸಾಗಿರುವುದರಿಂದ, ಅರ್ಥಗರ್ಭಿತವಾಗಿರುವುದರಿಂದ ಮೂಲ ಶ್ಲೋಕಗಳನ್ನೆ ಇಲ್ಲಿ ಕಾಣಿಸಿದ್ದೇನೆ.

*'ಆಮ್ನಾಯಸಿದ್ಧೇ ಕಿಮಪೂರ್ವಮೇತತ್ ಸಂವಿದ್ವಿಕಾಸೇಽಧಿಗತಾಗಮಿತ್ವಂ।*
*ಇತ್ಥಂ ಸ್ವಯಂಗ್ರಾಹ್ಯಮಹಾರ್ಹಹೇತು-ದ್ವಂದ್ವೇನ ಕಿಂ ದೂಷಯಿತಾ ನ ಲೋಕಃ ॥'*

ಸುಹೃದಯರ ಮನಸ್ಸಿನಲ್ಲಿ ಇದೊಂದು ಶಂಕೆ ತೋರಿಕೊಳ್ಳಬಹುದು. ಈ ಶಾಸ್ತ್ರಗ್ರಂಥವನ್ನು ರಚಿಸಿದವನು ಹೇಳಿರುವುದೆಲ್ಲ ಹಿಂದೆ ಹಿರಿಯರು ಹೇಳಿದ್ದೇ ತಾನೆ? ಹಿಂದೆಯೇ ಇದಕ್ಕೆ ಶಾಸ್ತ್ರಮರ್ಯಾದೆ ಒದಗಿದ್ದಿತಲ್ಲವೆ? ಅದನ್ನೇ ಹೊಸದಾಗಿ ಹೇಳುವುದರ ಅಗತ್ಯವೇನು? ಅಥವಾ ಹಳೆಯದನ್ನೇ ಹೊಸದೆಂದು ತೋರಿಸುವುದು ಸರಿಯಾದೀತೊ? ಎಲ್ಲರಿಗೂ ಅದು ತಿಳಿದೇ ಇರುವಾಗ ಇದು ತಪ್ಪಾಗುವುದಿಲ್ಲವೆ?

*'ಊರ್ಧ್ವೋರ್ಧ್ವಮಾರುಹ್ಯ ಯದರ್ಥತತ್ತ್ವಂ ಧೀಃ ಪಶ್ಯತಿ ಶ್ರಾಂತಿಮವೇದಯಂತೀ।*
*ಫಲಂ ತದಾದ್ಯೈಃ ಪರಿಕಲ್ಪಿತಾನಾಂ ವಿವೇಕ ಸೋಪಾನ ಪರಂಪರಾಣಾಂ॥'*

ಒಂದೊಂದು ತಲೆಮಾರಿನಲ್ಲೂ ಬುದ್ಧಿಯು ಮೇಲೆ ಮೇಲೆ ಸಾಗುತ್ತ, ಆಯಾಸ ಕಾಣದೆ ಹತ್ತುತ್ತಲೆ ಇರುವುದು ಸಹಜ; ಹಾಗೆ ಏರುತ್ತಿರುವುದರಿಂದಲೇ ಅರ್ಥತತ್ತ್ವವನ್ನು ಹೆಚ್ಚು ಹೆಚ್ಚು ಸ್ಪಷ್ಟವಾಗಿ ಕಾಣಲು ಸಾಧ್ಯವಾಗಿರುವುದು. ಹಿಂದಿದ್ದ ಹಿರಿಯರು ಸಿದ್ಧಪಡಿಸಿರುವ ಇಂಥ ವಿವೇಕ ಸೋಪಾನಗವೆಂಬ ಏಣಿಯು ಇರುವುದರಿಂದಲೆ ನಾವು ಮೇಲೆ ಮೇಲೆ ಹೋಗಲು ಸಾಧ್ಯವಾಗಿರುವುದು.

*'ಚಿತ್ರಂ ನಿರಾಲಂಬನಮೇವ ಮನ್ಯೇ ಪ್ರಮೇಯಸಿದ್ಧೌ ಪ್ರಥಮಾವತಾರಂ।*
*ಸನ್ಮಾರ್ಗಲಾಭೇ ಸತಿ ಸೇತುಬಂಧ ಪುರಪ್ರತಿಷ್ಠಾದಿ ನ ವಿಸ್ಮಯಾಯ॥'*

ಗೋಡೆಯಿದ್ದರೆ ತಾನೆ ಅದರ ಮೇಲೆ ಚಿತ್ರ ಬಿಡಿಸುವುದು ಸಾಧ್ಯವಾದೀತು? ಗೋಡೆಯೇ ಇರದೆ ಚಿತ್ರ ಇರುವುದು ಹೇಗೆ? ಹಿಂದಿನವರ ಕಲ್ಪನೆ, ಪ್ರಯೋಗ, ನಿರೂಪಣೆಗಳ ನೆರವಿರದೆ ಇಂದಿನವರು ಏನನ್ನು ತಾನೆ ಮಾಡಿಯಾರು? ನದಿಯನ್ನು ದಾಟಲು ಹೊರಡುವವರು ತಾವೇ ಮೊಟ್ಟಮೊದಲಾಗಿ ನೀರಿಗಿಳಿದರೆ ಅದು ಸಾಹಸವೇ ಸರಿ. ಆದರೆ ದಾಟುವ ದಾರಿಯನ್ನು ಹಿರಿಯರಿಂದ ಅರಿತುಕೊಂಡ ಮೇಲೆ, ದಾಟುವುದರಲ್ಲಿ ಆಶ್ಚರ್ಯವೇನಿದೆ? ಒಳ್ಳೆಯ ದಾರಿ ತಿಳಿದುಕೊಂಡ ಮೇಲೆ ಯಾವ ಕೆಲಸವನ್ನಾದರೂ ಕೈಗೊಳ್ಳ ಬಹುದಲ್ಲವೆ? ನದಿಗೆ ಸೇತುವೆಯನ್ನು ಕಟ್ಟಬಹುದು, ಊರನ್ನು ನಿರ್ಮಿಸಬಹುದು.

'ತಸ್ಮಾತ್ತತ್ರಾಮತ್ರ ನ ದೂಷಿತಾನಿ ಮತಾನಿ ತಾನ್ಯೇವ ತು ಶೋಧಿತಾನಿ।
ಪೂರ್ವಪ್ರತಿಷ್ಠಾಪಿತ ಯೋಜನಾಸು ಮೂಲ ಪ್ರತಿಷ್ಠಾಫಲಮಾಮನಂತಿ॥'

ಹಿಂದಿನವರು ಮಾಡಿದ್ದನ್ನು ಆಸರೆಯಾಗಿರಿಸಿಕೊಂಡೇ ಮುಂದಿನವರು ಮಾಡಹೊರಡುವುದು. ಯಾರಾಗಲಿ ಹಚ್ಚ ಹೊಸತಾಗಿ ಏನನ್ನೂ ಮಾಡಲಾರರು. ಮುಂಚೆ ಸಿದ್ಧವಾದ ಯೋಜನೆಗಳಲ್ಲೇ ವಿಚಾರ ಪೂರ್ವಕವಾಗಿ ಮಾರ್ಪಾಟನ್ನು ಮಾಡಿಕೊಂಡಾಗ ಹೊಸತೆಂದೇ ಕಾಣಿಸೀತು ! ಆದುದರಿಂದ ಹಿಂದಿನವರ ಅಭಿಪ್ರಾಯಗಳಲ್ಲಿ ದೋಷಗಳನ್ನೆ ಎಣಿಸಲಾಗದು; ಅವರ ಅಭಿಪ್ರಾಯಗಳನ್ನು ಇನ್ನಷ್ಟು ತಿಳಿಯಾಗಿ, ಸ್ಪಷ್ಟವಾಗಿ, ಪರಿಶುದ್ಧವಾಗಿ ಮಾಡಿಕೊಳ್ಳಬೇಕು.

ಪ್ರಾಚೀನ ಕಾಲದಲ್ಲೇ ರಸವಿಚಾರವು ಇದ್ದಿತಾದರೂ, ಭರತಮುನಿಯು ಮಾಡಿದ ಕೆಲಸ ಅದರ ಪರಿಷ್ಕಾರ, ಅದರ ಸಂಸ್ಕರಣ, ಅಭಿನಯಕ್ಕೆ ಅದರ ಅನ್ವಯ. ಇದೊಂದು ದೊಡ್ಡ ಕೊಡುಗೆಯೇ ಆಯಿತು. ರಸಸಿದ್ಧಾಂತದ ಪ್ರವರ್ತನೆಯಾದದ್ದು ಭರತಮುನಿಯಿಂದಲೇ ಎನ್ನುವಾಗ ಭರತಮುನಿಯು ಹೀಗೆಂದು ಎಲ್ಲಿಯೂ ಹೇಳಿಲ್ಲವೆನ್ನುವುದನ್ನೂ ಗಮನಿಸಬೇಕು. 'ನಾಟ್ಯೇ ಏವ ರಸಾಃ, ನ ಲೋಕೇ' (ರಸವಿರುವುದು ನಾಟ್ಯದಲ್ಲೇ ಎಂದರೆ ಕಲೆಯಲ್ಲೇ, ಜನರ ವ್ಯವಹಾರದಲ್ಲಲ್ಲ) ಎನ್ನುವುದು ಭರತಮುನಿಯ ಅಭಿಪ್ರಾಯವೆಂದು ಅಭಿನವಗುಪ್ತನು ಹೇಳುವಾಗ ರಸನಿಷ್ಪಾದನೆಯು ಕಾವ್ಯದಲ್ಲೊ, ಸಂಗೀತದಲ್ಲೊ, ನಾಟ್ಯದಲ್ಲೊ, ನಾಟಕದಲ್ಲೊ ಆಗುವುದು ಹೇಗೆಂಬುದನ್ನು ತಿಳಿಸಲೆಂದೇ ಭರತಮುನಿಯು ನಾಟ್ಯಶಾಸ್ತ್ರವನ್ನು ರಚಿಸಿದನೆಂಬುದು ಧ್ವನಿ.

ಸಂಪ್ರದಾಯಕಲೆಯೆಂದರೆ ಇದೇ ತಾತ್ಪರ್ಯ. ಇನ್ನೂರು ಮುನ್ನೂರು ವರ್ಷಗಳು ಕಳೆದಮಾತ್ರಕ್ಕೆ ಅದು ಸಂಪ್ರದಾಯವೆನಿಸಿ ಕೊಳ್ಳುವುದಿಲ್ಲ. ಅದರ ಅಭಿರುಚಿಯಲ್ಲಿ, ಅಭಿವ್ಯಕ್ತಿಯಲ್ಲಿ ಭರತಮುನಿಯ ನಾಟ್ಯಶಾಸ್ತ್ರದಲ್ಲಿ ಬಂದಿರುವ ರಸಸ್ಥಿತಿಯ ಚೌಕಟ್ಟು ಇದ್ದರೆ ಮಾತ್ರ ನಾಟ್ಯವಾಗಲಿ, ಚಿತ್ರವಾಗಲಿ, ಸಂಗೀತವಾಗಲಿ, ನಾಟಕವಾಗಲಿ, ಕಾವ್ಯವಾಗಲಿ ಸಂಪ್ರದಾಯಶುದ್ಧವಾದೀತು. ಕಲೆಯಲ್ಲಿ ಇರಬೇಕಾದ ರಸಾನುಭವ, ರಸನಿಷ್ಪತ್ತಿ, ರಸಸಂಕ್ರಮಣಗಳು ಸಂಪ್ರದಾಯತೆಯನ್ನು ಸೂಚಿಸಬೇಕು. ಹೀಗೆ ಸಂಪ್ರದಾಯ ಕಲೆಗೆ ಒರೆಗಲ್ಲು ಭರತಮುನಿಯ ನಾಟ್ಯಶಾಸ್ತ್ರವೇ.

*(ಮುಂದುವರಿಯುವುದು)*

ಭಾರತೀಯ ಸಂಗೀತದ ಭವಿಷ್ಯ, ರೂಪುರೇಖೆಗಳು ಎಂತು? ಪ್ರಗತಿ ಮಾರ್ಗದಲ್ಲಿದೆಯೇ ಅಥವಾ ತಟಸ್ಥವಾಗಿದೆಯೇ? ಈ ಪ್ರಶ್ನೆಗಳು ಮೂಡುವುದು ಸ್ವಾಭಾವಿಕ. ಈಗ ಒಂದೆರಡು ಶತಮಾನಗಳಲ್ಲಿದ್ದ ಕಲೆಯ ಹಿನ್ನೆಲೆಯಿಂದ ನೋಡಿದಲ್ಲಿ ಇಂದಿನ ಕಲೆಯು ಸ್ವಲ್ಪ ನಿಸ್ತೇಜವೆನ್ನಿಸುತ್ತದೆ. ಅಂತೆಯೇ, ಅದಕ್ಕೂ ಹಿಂದಿನ ಲಕ್ಷಣಗ್ರಂಥಗಳನ್ನು ಪರಿಶೀಲಿಸಿದಲ್ಲಿ, ಶತಮಾನದ ಹಿಂದಿನ ಕಲೆಗಿಂತ ಅಂದು ಇನ್ನೂ ಪ್ರೌಢಾವಸ್ಥೆಯಲ್ಲಿತ್ತೆನ್ನಿಸುತ್ತದೆ. ಅದರ ಸ್ವಭಾವವೇ ಅಂತಹದು. ಸಂಗೀತ ಕಲೆಯು ಒಂದು ಸಜೀವ ನದಿಯಂತೆ, ಸನ್ನಿವೇಶ ಮತ್ತು ಕಾಲವನ್ನನುಸರಿಸಿ ಪ್ರವರ್ಧಿತವಾಗುತ್ತಿದೆ. ಕೆಲವು ಸಮಯ ಅದರ ಪ್ರಮಾಣ ಹೆಚ್ಚಿರಬಹುದು, ಇನ್ನೂ ಕೆಲವು ಸಮಯ ಕಡಿಮೆ ಇರಬಹುದು.

ಈ ದೃಷ್ಟಿಯಿಂದ ಪರಿಶೀಲಿಸಿದಲ್ಲಿ, ಈ ಶತಮಾನದಲ್ಲಿ, ಅದರಲ್ಲಿಯೂ ಕಳೆದೆರಡುಮೂರು ದಶಕಗಳಲ್ಲಿ ಭಾರತೀಯ ಸಂಗೀತ ಕ್ಷೇತ್ರದಲ್ಲಿ ವಿಶೇಷ ಬದಲಾವಣೆಗಳಾಗಿರುವುದು ಕಂಡು ಬರುವುದು. ಸಂಗೀತದ ಸಾಧನ, ನಿರೂಪಣ, ಪೋಷಣ, ಮಿಗಿಲಾಗಿ ಅಭಿರುಚಿ ಮತ್ತು ಪ್ರವೃತ್ತಿಗಳಲ್ಲಿ ಆಗಿರುವ ಬದಲಾವಣೆಗಳು ಗಮನಾರ್ಹ. ಸಂಗೀತದ ವಿಶಾಲ ರೂಪ, ಪ್ರೌಢಶೈಲಿ ಪುಷ್ಟಿಯುತ ಧೃಡ ದನಿ, ಇವೆಲ್ಲ ಕಣ್ಮರೆಯಾಗುತ್ತಿವೆ. ಅವುಗಳ ಬದಲು, ಸಂಗೀತವು ಸರಳತೆಯನ್ನು ತಾಳುತ್ತಿದೆ. ಪ್ರವೃತ್ತಿಯಲ್ಲಿಯೂ ಅಷ್ಟೇ, ಹೆಚ್ಚು ಶ್ರಮಯುತ ಪ್ರೌಢಿಮೆಯು ಮಾಯವಾಗುತ್ತಿದೆ. ಅಭಿರುಚಿಯಲ್ಲಿಯೂ ಅಷ್ಟೇ, ಕೇವಲ ಲಾಲಿತ್ಯದೆಡೆಗೆವಾಲಿದಂತಿದೆ.

ಇದಕ್ಕೆ ಕಾರಣಗಳೂ ಇವೆ. ಸಂಪರ್ಕ ಸಾಧನಗಳ ಅಭಾವವಿದ್ದ ಕಾಲದಲ್ಲಿ, ಕಲೆಯು ಒಂದೊಂದು ಕಡೆ ಕೇಂದ್ರೀಕೃತವಾಗಿ, ಸ್ಥಳಸನ್ನಿವೇಶಗಳಿಗನುಗುಣವಾದ ವಿಶೇಷ ಶೈಲಿ, ರುಚಿಗಳಿಂದ ವೃದ್ಧಿಯಾಯಿತು. ಅನ್ಯ ಭಾಗ ಅನ್ಯ ದೇಶಗಳ ಸಂಪರ್ಕವು ಹೆಚ್ಚಿದಂತೆ, ಅಲ್ಲಿಯ ಕಲೆಯ ಪ್ರಭಾವ, ಪ್ರವಾಹಗಳ ಪರಿಣಾಮವಾಗಿ, ಇಲ್ಲಿಯೂ ವಿಚಾರಮಥನವಾಗುವುದು ಅನಿವಾರ್ಯ. ಜತೆಗೆ ಇದುವರೆಗೂ ಭಾರತೀಯ ಸಂಗೀತದ ಒಂದು ಪ್ರಬಲ ಸ್ಫೂರ್ತಿಯೆಂದರೆ, ಜನತೆಯ ಧಾರ್ಮಿಕತೆ, ಭಕ್ತಿಭಾವ. ಅದರ ಬಲವು ಕಡಿಮೆಯಾದಂತೆ, ಅಭಿರುಚಿ ಮತ್ತು ಪ್ರವೃತ್ತಿಯಲ್ಲಿಯೂ ವ್ಯತ್ಯಾಸವಾದುದನಿವಾರ್ಯ. ಆತ್ಮಾನಂದ ದಿಂದ-ಮನರಂಜನೆ, ಮನರಂಜನೆಯಿಂದ ಇಂದ್ರಿಯ ಸುಖಾನುಭವದೆಡೆಗೆ ಕೆಲವು ಸಮಯ ವಾಲಿದಂತೆ ಭಾಸವಾಗುತ್ತಿದೆ.

ಶ್ರೀ ಬಿ. ವಿ. ಕೆ. ಶಾಸ್ತ್ರಿ ಯವರ- 'ಕಲೆಯ ಗೊಂಚಲು' - ಪುಸ್ತಕದಿಂದ

# ಮಾನಸೋಲ್ಲಾಸ



## ಟಿ. ಎಸ್. ಸತ್ಯವತಿ

ಗಾತ್ರದಿಂದ ಪಾತ್ರವನ್ನೂ ಅಳೆಯಬಹುದಾದರೆ, ಮಾನಸೋಲ್ಲಾಸದಲ್ಲಿ ಗಾಯನಕ್ಕಿರುವ ಪ್ರಾಶಸ್ತ್ಯವೇ ವಾದನಕ್ಕೂ ಇದೆಯೆನ್ನಬಹುದು. ಗೀತವಿನೋದದಲ್ಲಿನ ಶ್ಲೋಕಗಳ ಒಟ್ಟು ಸಂಖ್ಯೆ (ಉದಾಹರಣೆಗಳೂ ಸೇರಿ) 566 ಆಗಿದ್ದರೆ, ವಾದ್ಯವಿನೋದದಲ್ಲಿ 383 ಶ್ಲೋಕಗಳಿವೆ, ಉದಾಹರಣೆಗಳಿಲ್ಲದೆ.

**ಸಭ್ಯೈಃ ಸಹ ಸಮಾಸೀನಃ ಶ್ರುಣುಯಾತ್ತುಸಮಾಹಿತಃ।**
**ವಾದ್ಯೇನ ರಾಜತೇ ಗೀತಂ ನ ನೃತ್ಯಂ ವಾದ್ಯವರ್ಜಿತಮ್।**
**ತಸ್ಮಾದ್ವಾದ್ಯಂ ಪ್ರಧಾನಂ ಸ್ಯಾತ್ ಗೀತನೃತ್ಯಕ್ರಿಯಾವಿಧೌ।**

ಗೀತವಾಗಲಿ, ನೃತ್ಯವಾಗಲಿ ವಾದ್ಯದಿಂದಲೆ ರುಚಿಸುತ್ತದೆ. ವಾದ್ಯವಿಲ್ಲದೆ ಕಳೆಯೇರುವುದಿಲ್ಲ. ಆದ್ದರಿಂದ ಪ್ರಯೋಗದಲ್ಲಿ ವಾದ್ಯದ ಪ್ರಾಧಾನ್ಯ ಹೆಚ್ಚಿನದು.

'ಪೃಥಗ್ವಾದ್ಯ' (ಪ್ರತ್ಯೇಕವಾಗಿ ನುಡಿಸುವ ವಾದ್ಯ), 'ಗೀತ ಸಂಗತ' (ಹಾಡಿನೊಂದಿಗೆ ನುಡಿಸುವ) 'ನೃತ್ತಾನುಗ' (ನೃತ್ಯವನ್ನನುಸರಿಸಿ ನುಡಿಸುವ) ಮತ್ತು 'ಗೀತನೃತ್ಯಗ' (ಗೀತ, ನೃತ್ಯಗಳೆರಡಕ್ಕೂ ಒದಗಿ ಬರುವ) ಎಂದು ವಾದ್ಯಗಳನ್ನು ವರ್ಗೀಕರಿಸಿದ ಬಳಿಕ, ಎಲ್ಲರಿಗೂ ಸಾಮಾನ್ಯವಾಗಿ ತಿಳಿದಿರುವ 'ತತ', 'ವಿತತ', 'ಘನ' ಹಾಗೂ 'ಸುಷಿರ'ವೆಂಬ ನಾಲ್ಕು ವಿಧವಾದ ವಾದ್ಯಪ್ರಕಾರಗಳನ್ನೂ ಹೆಸರಿಸಲಾಗಿದೆ.

ಗಟ್ಟಿಯಾದ ತಂತಿಗಳನ್ನು ಹೊಂದಿರುವ ವಾದ್ಯಗಳೇ 'ತತ' ವಾದ್ಯಗಳು. ತಂತಿಗಳ ಭಿನ್ನತೆಯಿಂದಲೂ ನುಡಿಸುವುದರಲ್ಲಿನ ವ್ಯತ್ಯಾಸದಿಂದಲೂ 'ವೀಣೆ'ಯು ಅನೇಕ ವಿಧ ಎನ್ನುವಾಗ, ಎಲ್ಲ ತಂತಿವಾದ್ಯಗಳಿಗೂ 'ವೀಣೆ', ಸಾಮಾನ್ಯ ಹೆಸರಾದಂತೆ ತೋರುತ್ತದೆ.

**''ತಂತ್ರೀಭೇದೈಃ ಕ್ರಿಯಾಭೇಃ ವೀಣಾವಾದ್ಯಮನೇಕಧಾ''**
**''ದೃಢತಂತುಸಮುದ್ಭೂತಂ ವಾದಿತ್ರಂ ಚ ತತಂ ಮತಮ್''**

ಎಂದು ಹೇಳಿ, ವಾದ್ಯರಚನಾಕ್ರಮವನ್ನು ವಿವರಿಸುವಾಗ 'ಏಕತಂತ್ರೀವೀಣೆ' 'ಆಲಾವಣಿ' ಅಥವಾ 'ಲಾವಣಿಕಾ ವೀಣೆ' ಮತ್ತು ಎರಡು ವಿಧವಾದ 'ಕಿನ್ನರಿ' (ಲಘು ಕಿನ್ನರಿ, ಎರಡು ತುಂಬಗಳನ್ನು ಹೊಂದಿದ್ದು, ಮೂರು ಬುರುಡೆಗಳಿಂದ ಕೂಡಿರುವುದು, ಬೃಹತ್ಕಿನ್ನರಿ)ಯ ಬಗ್ಗೆ ಮಾತ್ರ ಮಾಹಿತಿಯಿದೆ. ಆದರೆ, ನುಡಿಸುವಿಕೆಯ ವಿಧಗಳಲ್ಲಿ, ಕಮಾನಿನಿಂದ ಉಜ್ಜಿ ನುಡಿಸುವ (''ಧನುರಾಘರ್ಷಸಂಭವಮ್'') ವಾದ್ಯ ಪ್ರಕಾರದ ಸೂಚನೆಯೂ ಇದೆ.

ಮಾನಸೋಲ್ಲಾಸದಲ್ಲಿ ವಿವಿಧ ವಾದ್ಯಗಳ ನಿರ್ಮಾಣದ ಹಂತಗಳ ಆದ್ಯಂತ ವಿವರಗಳು ಸುದೀರ್ಘವಾಗಿದ್ದರೂ ಅಸ್ಪಷ್ಟಪಾಠದ ಕಾಟ ಇಲ್ಲೂ ಮುಂದುವರಿದಿದ್ದು ಹೆಚ್ಚಿನ ಪ್ರಯೋಜನವನ್ನು ನಿರೀಕ್ಷಿಸುವಂತಿಲ್ಲ. 'ಶಾಂಕರಾಕ್ಷ', 'ಬೀಜವೃಕ್ಷ', 'ಕಂಠಾರ್ಗಲ', 'ಮದನ', 'ನಾಗಪಾಶ' ಇಂತಹ ಶಬ್ದಗಳಿಗೆ ಸಾಂದರ್ಭಿಕವಾಗಿಯಾದರೂ ಅರ್ಥ ಹುಡುಕುವುದು ಎಷ್ಟು ಕಷ್ಟ!

ಏಕತಂತ್ರೀ ವೀಣೆಯ ದಂಡವೇ ಶಿವ, ತಂತಿಯೇ ಪಾರ್ವತಿ, ಕಾಕುಭವೇ ಜನಾರ್ದನ, ಪತ್ರಿಕೆಯೇ ಲಕ್ಷ್ಮೀ, ತುಂಬವೇ ಬ್ರಹ್ಮ, ನಾಭಿಯೇ ಸರಸ್ವತಿ, ದಾರದನೂಲೇ ವಾಸುಕಿ, ಜೀವೆಯೇ ಚಂದ್ರ ಮತ್ತು ದೋರಿಕೆ (ಗಂಟು ಹಾಕಿದ ನೂಲಿನೆಳೆ)ಯೇ ಸೂರ್ಯ. ಈ ಪಾವನಕರವಾದ ವೀಣೆಯ ದರ್ಶನ, ಸ್ಪರ್ಶ ಮಾತ್ರದಿಂದಲೇ ಮಹಾಪಾಪ ಪರಿಹಾರ ಎಂಬ ಪ್ರಶಂಸೆಯಿದೆ.

ವೀಣೆಯ ನಾದೋತ್ಪತ್ತಿಯಲ್ಲಿ ಪ್ರಧಾನ ಪಾತ್ರ ವಹಿಸುವುದು 'ಜೀವೆ'. ಇದನ್ನು ತಂತಿ ಮತ್ತು ಪತ್ರಿಕೆಗಳ ನಡುವೆ ಇರಿಸಬೇಕು. (ತಂತ್ರೀ ಪತ್ರಿಕಯೋರ್ಮಧ್ಯೇ ಜೀವಾಂ ತತ್ರ ವಿನಿವೇಶಯೇತ್) ನಾದ ಸಂಪನ್ನವಾಗುವುದೇ

ಜೀವೆಯಿಂದ. ''ತಯಾ ಸಂಪದ್ಯತೇ ನಾದಃ ತೇನ ಜೀವೇತಿ ಸಾ ಸ್ಮೃತಾ'' ಮತ್ತು ''ಜೀವಾ ಲಗ್ನಾ ಪ್ರಕರ್ತವ್ಯಾ ಯಥಾ ನಾದೋಭಿಜಾಯತೇ'' ವಾಕ್ಯಗಳು ಇದಕ್ಕೆ ಆಧಾರ.

ಹಲವು ಬಗೆಯ ಮೀಟುಗಳನ್ನೂ ನುಡಿಸುವ ರೀತಿಯನ್ನೂ ವರ್ಣಿಸುವ ಭಾಗ ಅತ್ಯಂತ ಸ್ವಾರಸ್ಯಕರ ವಾಗಿದೆ. ಎಡಗೈ ಚಲನೆಗೆ 'ಸಾರಣೆ' ಎಂದು ಹೆಸರು. ಇದು 'ಸನ್ನಿವಿಷ್ಟ', 'ಉತ್‌ಕ್ಷಿಪ್ತ' ಅಥವಾ ಎರಡೂ ಬಗೆಯದಾಗಿರಬಹುದು. ತಂತಿಯೊಡನೆ ಸಂಪರ್ಕ ಕಳೆದುಕೊಳ್ಳದೆ ಚಲಿಸುವುದು 'ಸನ್ನಿವಿಷ್ಟ' ವಾದರೆ, ಮತ್ತೆ ಮತ್ತೆ ತಂತಿಯನ್ನು ಮುಟ್ಟುತ್ತಾ ನುಡಿಸುವ ಕ್ರಮ 'ಉತ್ಕ್ಷಿಪ್ತ'. ಒಮ್ಮೊಮ್ಮೆ ಈ ಎರಡೂ ಕ್ರಮ ಸೇರಿದಂತೆ ನುಡಿಸಿದಾಗ 'ಉಭಯಾತ್ಮಿಕಾ' ಎಂಬ ಪದ್ಧತಿ ಉಂಟಾಗುತ್ತದೆ.

ಮುಂದೆ ಬಗೆಬಗೆಯ ಬಲಗೈಯ ನುಡಿತಗಳು; ದ್ರುತಗತಿಯಲ್ಲಿ ನಾಲ್ಕು ಬೆರಳುಗಳ ಮೀಟು 'ಭ್ರಮರ' ಹೀಗೆ ವೇಗವಾಗಿ ನಾಲ್ಕೂ ಬೆರಳುಗಳಿಂದ ತಂತಿಗಳಿಗೆ ಹೊರಮೊಗವಾಗಿ ಘಾತಿಸಿದರೆ. 'ಕರ್ತರಿ'.

ನಾಲ್ಕು ಬೆರಳುಗಳ ಉಗುರುಗಳಿಂದ ವೇಗವಾಗಿ ಮೀಟುವುದು 'ನಖಕರ್ತರಿ'. ಉಳಿದ ಬೆರಳುಗಳನ್ನು ಬಳಸದೆ ಕೇವರ ಹೆಬ್ಬೆರಳಿನ ಪಾರ್ಶ್ವದಿಂದ ಮಿಡಿದರೆ 'ನಿರ್ಘೋಷ'. ಉಂಗುರದ ಬೆರಳಿನಿಂದ ಒಳಮೊಗವಾಗಿ ಮತ್ತು ನಡುಬೆರಳಿನಿಂದ ಹೊರಮೊಗವಾಗಿ ಮೀಟಿದರೆ 'ರೇಫ' ತೋರುಬೆರಳು ಮತ್ತು ಹೆಬ್ಬೆರಳುಗಳ ತುದಿಯಿಂದ ತಂತಿಯನ್ನು ಎಳೆಯಲ್ಲಿ 'ಶುಕವಕ್ತ್ರ' (ಆಗ ಬೆರಳುಗಳ ವಿನ್ಯಾಸ, ಗಿಣಿಯ ಕೊಕ್ಕಿನಂತೆಯೇ ಕಾಣುವುದರಿಂದ ಔಚಿತ್ಯ.). ಕಿರುಬೆರಳು ಮತ್ತು ಹೆಬ್ಬೆರಳುಗಳಿಂದ ಅರ್ಧಚಂದ್ರಾಕೃತಿಯಲ್ಲಿ ಕೈಯನ್ನು ರೂಪಿಸಿ ನುಡಿಸುವುದನ್ನು 'ಸಂಪ್ರಸಾರ'ವೆನ್ನುತ್ತಾರೆ.

''ಏವಂ ದಶವಿಧಂ ವಾದ್ಯಂ (ವಾದನ ಪ್ರಕಾರವೆಂದೇ ಅರ್ಥ) ಪ್ರಾಹ ಸೋಮೇಶ್ವರೋ ನೃಪಃ'' ಎಂದು ವಾದನ ವಿಧಿ ಹತ್ತು ವಿಧ ಎಂದರೂ ಹಲವು ಹತ್ತು ಬಗೆಯ ಮೀಟುಗಳನ್ನು ಸಾರಣೆಗಳನ್ನೂ ವಿವರಿಸಲಾಗಿದೆ. (ಈ ಸಂದರ್ಭದಲ್ಲಿ ಹರ್ಷನ 'ನಾಗಾನಂದ' ನಾಟಕದಲ್ಲಿ ವೀಣೆಯನ್ನು ನುಡಿಸುವ ಹತ್ತು ವಿಧಗಳ ಉಲ್ಲೇಖವಿರುವುದನ್ನು ಸ್ಮರಿಸಬಹುದು).

'ಸಕಲ' ಮತ್ತು 'ನಿಷ್ಕಲ'ವೆಂದು ಮತ್ತೆರಡು ವಿಧಾನಗಳನ್ನು ಹೇಳಲಾಗಿದೆ.

**''ಸ್ಥೂಲೋ ಧ್ವನಿರ್ಭವೇದ್ಯತ್ರ ವಾದ್ಯಂ ತತ್ಸಕಲಂ ಭವೇತ್।**
**ಕಲಾಹೀನಾ ಪ್ರಕರ್ತವ್ಯಾ ಬಿಂದೋರುತ್ಪಾದಹೇತವೇ॥**

ಸ್ಥೂಲವಾದ ಧ್ವನಿಯು 'ಸಕಲ'ವೂ, ಕಲಾರಹಿತವಾದ ಸೂಕ್ಷ್ಮ ಕಂಪನವೇ 'ನಿಷ್ಕಲ'ವೂ ಆಗಿದ್ದು, 'ನಿಷ್ಕಲ'ವನ್ನೇ 'ಬಿಂದು'ವೆನ್ನುವುದು. ಇದನ್ನು ಉತ್ಪಾದಿಸುವ ಕ್ರಮವನ್ನು ಸೋಮೇಶ್ವರನು ಹಿಂದೆಯೇ ಹೀಗೆ ಹೇಳಿದ್ದಾನಂ.

**''ಅನಾಮಿಕಾಬಹಿರ್ಘಾತಸ್ತರ್ಜನ್ಯಾ ಯದಿ ಧಾರ್ಯತೇ।**
**ನಾದಸ್ತದಾ ಸಮಾಖ್ಯಾತೋ ಬಿಂದುರ್ನಾಮ ಮನೀಷಿಭಿಃ॥**

ಉಂಗುರದ ಬೆರಳಿನಿಂದ ಹೊರಮೊಗವಾಗಿ ಮೀಟಿ, ತೋರು ಬೆರಳಿನಿಂದ ಅದನ್ನು ನಿಯಂತ್ರಿಸಿದಾಗ ಉಂಟಾಗುವ ನಾದವೇ 'ಬಿಂದು'. (ಇದೇ ವಿವರಣೆ ಸಂಗೀತ ರತ್ನಾಕರದಲ್ಲಿ ಇದೆ.) ಸೋಮೇಶ್ವರನು ನೀಡಿರುವ ಈ ವಾದನ ವಿಧಾನಗಳಲ್ಲಿ ಅನೇಕವುಗಳನ್ನು ಇಂದಿಗೂ ವೈಣಿಕರು ಪ್ರಯೋಗಿಸುವುದನ್ನು ಕಾಣಬಹುದು.

(ಮುಂದುವರಿಯುವುದು)

## ಅಭಿನಂದನೆ

ನಮ್ಮ ನಾಡಿನ ಶ್ರೇಷ್ಠ ಗಾಯಕಿ, ಗಾನಕಲಾಶ್ರೀ **ವಿದುಷಿ ಎಂ. ಎಸ್. ಶೀಲಾರವರು** ಈ ಬಾರಿಯ **''ಅನನ್ಯ ಪುರಸ್ಕಾರ ಪ್ರಶಸ್ತಿ''ಗೆ** ಭಾಜನರಾಗಿದ್ದಾರೆ. ಅವರಿಗೆ ಅನನ್ಯ ಬಳಗದ ಹಾರ್ದಿಕ ಅಭಿನಂದನೆಗಳು. ಈ ಹಿಂದೆ ಅನನ್ಯ ಪುರಸ್ಕಾರಕ್ಕೆ ಪಾತ್ರರಾದವರು **ಶ್ರೀ ಆರ್. ಕೆ. ಶ್ರೀಕಂಠನ್, ಶ್ರೀ ರಾಜನಾರಾಯಣ್ ಮತ್ತು ಶ್ರೀಮತಿ ಟಿ. ಎಸ್. ಸತ್ಯವತಿಯವರು.**

# ಸಂಗೀತ ಸರಿತಾ

## ಹೆಸರು ಒಂದೇ - ರೂಪ ಬೇರೆ

**ಎಸ್. ಕೃಷ್ಣಮೂರ್ತಿ**

೨೧, ಜೂನ್ ೧೯೭೦

ಕುಸುಮ,

''ಸರಸ್ವತೀ ಮನೋಹರಿ'' ರಾಗದಲ್ಲಿ ತ್ಯಾಗರಾಜರ ಕೀರ್ತನೆ ಪಾಠವಾಗಿದೆ ಎಂದು ತಿಳಿಸಿದ್ದೀಯೆ. ಸಂತೋಷ. ಇದೇ ಸರಸ್ವತೀ ಮನೋಹರಿಯಲ್ಲಿ ''ಸರಸ್ವತಿ ಮನೋಹರಿ ಶಂಕರಿ'' ಎಂದು ಮೊದಲಾಗುವ ದೀಕ್ಷಿತರ ಕೀರ್ತನೆ ಒಂದಿದೆ. ಮೇಷ್ಟನ್ನು ಕೇಳಿ ಅದನ್ನು ಹೇಳಿಸಿಕೋ.

ಈ ಕೀರ್ತನೆಯನ್ನು ಏಕೆ ಪಾಠ ಮಾಡು ಎಂದು ಹೇಳಿದೆ ಎಂದರೆ ತ್ಯಾಗರಾಜರ ಸರಸ್ವತೀ ಮನೋಹರಿಗೂ ದೀಕ್ಷಿತರ ಸರಸ್ವತೀ ಮನೋಹರಿಗೂ ಇರುವ ವ್ಯತ್ಯಾಸ ನಿನಗೆ ತಿಳಿದಿರಲಿ ಎಂದು. ತ್ಯಾಗರಾಜರ ಪ್ರಾಕಾರ ಈ ರಾಗ ೨೮ನೆಯ ಮೇಳ ಹರಿಕಾಂಬೋಧಿಯಲ್ಲಿ ಜನ್ಯ. ದೀಕ್ಷಿತರ ಪ್ರಕಾರ ೨೯ನೆಯ ಮೇಳ ಧೀರ ಶಂಕರಾಭರಣದಲ್ಲಿ ಜನ್ಯ. ಇದರಂತೆಯೇ ಇವರಿಬ್ಬರೂ ಬಳಸಿರುವ ಕೆಲವು ರಾಗಗಳ ನಾಮಕರಣ ಮಾತ್ರ ಒಂದು, ಸ್ವರೂಪ ಬೇರೆ ಬೇರೆ. ಆದರೆ ಮತ್ತೆ ಕೆಲವು ರಾಗಗಳ ನಾಮಕರಣ ಬೇರೆ, ಸ್ವರೂಪ ಒಂದೇ. ಉದಾಹರಣೆಗೆ ತ್ಯಾಗರಾಜರ ''ಉದಯರವಿಚಂದ್ರಿಕೆ'', ದೀಕ್ಷಿತರ ''ಶುದ್ಧಧನ್ಯಾಸಿ''; ತ್ಯಾಗರಾಜರ ಪೂರ್ವಿ ಕಲ್ಯಾಣಿ'', ದೀಕ್ಷಿತರ ''ಗಮಕಕ್ರಿಯ'' ಇತ್ಯಾದಿ. ಈ ಕಾರಣವನ್ನು ಮುಂದು ಮಾಡಿಕೊಂಡೇ ಕೆಲವರು ವಾದಿಸುವುದು ತ್ಯಾಗರಾಜರ ಪಂಥವೇ ಬೇರೆ, ದೀಕ್ಷಿತರ ಪಂಥವೇ ಬೇರೆ ಎಂದು. ಆದರೆ ಈ ಬೇಧಗಳು ತಲೆದೂರಿದ ಬಗೆ ಹೇಗೆ ಎಂಬುದನ್ನು ಸ್ವಲ್ಪ ಆಳವಾಗಿ ಪರೀಕ್ಷಿಸಿದರೆ ಈ ಅಭಿಪ್ರಾಯ ಸಾಧುವೇ ಅಲ್ಲವೇ ಎನ್ನುವುದು ವಿಶದವಾಗುತ್ತದೆ.

ಹದಿನಾಲ್ಕನೆಯ ಶತಮಾನಕ್ಕೆ ಸೇರಿದ ವಿದ್ಯಾರಣ್ಯಸ್ವಾಮಿಗಳ ಕಾಲದಿಂದ ಹದಿನೆಂಟನೆಯ ಶತಮಾನದ ತಂಜಾವೂರಿನ ತುಳಜಾಜಿ ಮಹಾರಾಜರ ಕಾಲದವರೆಗೆ ಕರ್ಣಾಟಕ ಸಂಗೀತ ಮತ್ತು ಸಂಪ್ರದಾಯಗಳಿಗೆ ಒಂದು ಅಖಂಡವಾದ, ಸಂಪೂರ್ಣವಾದ ಇತಿಹಾಸವಿದೆ. ಪುರಂದರದಾಸರು, ರಾಮಾಮಾತ್ಯರು, ಗೋವಿಂದ ದೀಕ್ಷಿತರು, ವೇಂಕಟಮುಖಿ, ಮೊದಲಾದ ವಿಖ್ಯಾತ ಲಕ್ಷಣ ಶಾಸ್ತ್ರಜ್ಞರು ರಚನಕಾರರು ಬಾಳಿ ಬೆಳಗಿದ ಕಾಲ ಅದು. ಕರ್ಣಾಟಕ ರಾಗಗಳ ವಿಷಯದಲ್ಲಿ ಇವರೆಲ್ಲರೂ ಪ್ರತಿಪಾದಿಸಿರುವ ಮತ ಒಂದೇ. ದೊರೆ ತುಳಜಾಜರು ರಚಿಸಿರುವ ''ಸಂಗೀತಸಾರಾಮೃತ'' ನಮ್ಮ ಸಂಗೀತದ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ತಮ್ಮ ಕಾಲದಲ್ಲಿ ರಾಗಗಳು ಹೇಗೆ ಪ್ರಚಾರದಲ್ಲಿದ್ದವೋ ಹಾಗೆಯೇ ಅವುಗಳನ್ನು ವಿವರಿಸಿರುವುದಾಗಿ ಮಹಾರಾಜರೇ ಹೇಳಿಕೊಂಡಿದ್ದಾರೆ ತಮ್ಮ ಗ್ರಂಥದಲ್ಲಿ. ರಾಗಗಳ ಹೆಸರುಗಳನ್ನೂ ಸಂಚಾರ ಕ್ರಮಗಳನ್ನೂ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ತ್ಯಾಗರಾಜರ ಮತ್ತು ದೀಕ್ಷಿತರ ಕಾಲ ಯಾವುದು? ಹದಿನೆಂಟನೆಯ ಶತಮಾನದ ಉತ್ತರಾರ್ಧ ಅಲ್ಲವೆ? ಆದುದರಿಂದ ಆಗ್ಗೆ ಪ್ರಚಾರದಲ್ಲಿದ್ದ ರಾಗಗಳನ್ನೆ, ಎಂದರೆ, ''ಸಂಗೀತಸಾರಾಮೃತ'' ದಲ್ಲಿ ಪ್ರಸ್ತಾಪಿಸಿರುವ ರಾಗಗಳನ್ನು ತಾನೇ ಅವರಿಬ್ಬರೂ ಕೇಳಿದ್ದಿರಬೇಕು, ಅವುಗಳಲ್ಲೇ ರಚಿಸಿದ್ದಿರಬೇಕು? ದೀಕ್ಷಿತರು ತಮ್ಮ ಕೀರ್ತನೆಗಳಿಗೆ ಸೂಚಿಸಿರುವ ಹೆಸರುಗಳೂ ಒಂದೇ ಆಗಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ತ್ಯಾಗರಾಜರ ಕೀರ್ತನೆಗಳ ರಾಗಗಳನ್ನು ನಿರ್ಧರಿಸುವುದಕ್ಕೂ ''ಸಂಗೀತಸಾರಾಮೃತ''ವನ್ನೇ ಆಧಾರ ಇಟ್ಟುಕೊಳ್ಳಬೇಕಾದುದು ನ್ಯಾಯಸಮ್ಮತ.

ಹಾಗಾದರೆ ರಾಗದ ಹೆಸರುಗಳಲ್ಲಿ ಹೀಗೆ ವ್ಯತ್ಯಾಸ ಬರಲು ಕಾರಣ ಏನು? ಎಂದು ನೀನು ಕೇಳಬಹುದು.

ಸುಪ್ರಿಂ ಕೋರ್ಟಿನ ಶ್ರೇಷ್ಠ ನ್ಯಾಯಮೂರ್ತಿಗಳಾಗಿದ್ದ ಶ್ರೀ ಟಿ. ಎಲ್. ವೆಂಕಟರಾಮಯ್ಯರ್ ಅವರ ಹೆಸರನ್ನು ನೀನು ಕೇಳಿಯೇ ಇರಬೇಕು. ಸಂಗೀತ ಶಾಸ್ತ್ರದಲ್ಲಿ ಘನವಿದ್ವಾಂಸರು ಇವರು. ತಮ್ಮ ಲೇಖನವೊಂದರಲ್ಲಿ ಈ ನಿನ್ನ ಪ್ರಶ್ನೆಯನ್ನು ದೀರ್ಘವಾಗಿ ವಿವೇಚಿಸಿದ್ದಾರೆ. ಅದರ ಸಾರಾಂಶವನ್ನು ನಿನಗೆ ಇಲ್ಲಿ ತಿಳಿಸುತ್ತಿದ್ದೇನೆ.

ಸುಮಾರು ೧೮೮೦ರ ವೇಳೆಗೆ ಸಿಂಗರಾಚಾರ್ಯಲು ಸಹೋದರರೆಂಬ ಇಬ್ಬರು ವಿದ್ವಾಂಸರು ಹಸ್ತ ಪ್ರತಿಗಳಲ್ಲಿದ್ದ ಕೀರ್ತನೆಗಳನ್ನು ಮುದ್ರಿಸಿ ಪ್ರಕಟಿಸಲು ಪ್ರಾರಂಭಿಸಿದರು. ಕೀರ್ತನೆಗಳನ್ನು ಅಚ್ಚು ಹಾಕುವಾಗ ಅವುಗಳ ರಾಗ ತಾಳಗಳನ್ನು ಸೂಚಿಸಬೇಕಷ್ಟೇ? ಕ್ರಿ. ಶ. ೧೭ನೆಯ ಶತಮಾನದಿಂದ ಕ್ರಿ. ಶ. ೧೮ನೆಯ ಶತಮಾನದವರೆಗೆ ಲಕ್ಷಣಶಾಸ್ತ್ರ ಹೇಗೆ ಬೆಳೆದುಬಂದಿತ್ತು ಎಂಬುದನ್ನು ಈ ಸಹೋದರರು ಆಳವಾಗಿ ಅಧ್ಯಯನ ಮಾಡಿದವರಲ್ಲ. ವೆಂಕಟಮುಖಿಗಳ ಮೇಳ ಪದ್ಧತಿಗೆ ಇವರು ಮನ್ನಣೆಕೊಡುತ್ತಿರಲಿಲ್ಲ. ಅಪೂರ್ವರಾಗಗಳ ಸಂಪ್ರದಾಯ ಇವರಿಗೆ ಹಿಡಿಸದು. ಆದುದರಿಂದ ಅಪೂರ್ವರಾಗಗಳ ವಿಷಯವಾಗಲಿ ಮೇಳಕರ್ತರಾಗಗಳ ವಿಷಯವಾಗಲೀ ಅಧಿಕಾರವಾಣಿಯಿಂದ ಮಾತನಾಡುವ ಅರ್ಹತೆ ಇರಲಿಲ್ಲ ಈ ಸಹೋದರರಿಗೆ ಎನ್ನಬಹುದು. ಯಾವ ರಾಗಗಳನ್ನು ಗುರುತಿಸುವುದು ಕಷ್ಟವೆಂದು ತೋರಿತೋ ಅವುಗಳನ್ನು ''ಅಪೂರ್ವರಾಗಗಳು'' ಎಂದು ಕರೆಯಲು ಪ್ರಾರಂಭಿಸಿದರು. ಬರುಬರುತ್ತ ಈ ಅಪೂರ್ವರಾಗಗಳ ಸಂಖ್ಯೆಯೂ ಬೆಳೆಯುತ್ತ ಹೋಯಿತು! ಮುಂದೇನು ಮಾಡಬೇಕು? ''ಅನ್ಯಮಿಂದ್ರಂ ಕರಿಷ್ಯಾಮಿ'' ಎಂದರು! ರಾಗಗಳಿಗೆ ಹೊಸ ಹೊಸ ಹೆಸರುಗಳನ್ನಿಡಲು ಪ್ರಾರಂಭಿಸಿದರು. ''ಯಾವ ಆಧಾರದಮೇಲೆ ಈ ನಾಮಕರಣ?'' ಎಂದು ಯಾರಾದರೂ ಕೇಳಿದರೆ, ಅದಕ್ಕುತ್ತರವಾಗಿ ಗೋವಿಂದ ಎಂಬುವನು ರಚಿಸಿದ ''ಸಂಗ್ರಹ ಚೂಡಾಮಣಿ'' ಎಂಬ ಗ್ರಂಥವನ್ನು ಮುಂದೆ ಹಿಡಿಯುತ್ತಿದ್ದರು. ಯಾರು ಈ ಗೋವಿಂದ? ಆತನ ಕಾಲ ಯಾವುದು? ಸ್ಥಳ ಯಾವುದು? ಆತನ ಗುರು ಯಾರು? ಶಿಷ್ಯರು ಯಾರು? ಈ ವಿವರಗಳು ಆ ಗೋಕುಲಾನಂದನಿಗೇ ಗೊತ್ತು! ಗೋವಿಂದ ಎಂಬ ಹೆಸರಿನಲ್ಲಿ ಈ ಅಣ್ಣ ತಮ್ಮಂದಿರೇ ಪ್ರಕಟಪಡಿಸಿದ ಗ್ರಂಥವಿರಬೇಕು ಇದು ಎಂದು ವಿದ್ವಾಂಸರಿಗೆ ಸಂದೇಹ. ರಾಗಗಳಿಗೆ ಈ ಸಹೋದರರು ಕೊಟ್ಟ ಹೊಸ ಹೆಸರುಗಳೊಂದಿಗೇ ತ್ಯಾಗರಾಜರ ಕೀರ್ತನೆಗಳು ತಮಿಳು ಮತ್ತು ತೆಲುಗು ಭಾಷೆಗಳಲ್ಲಿ ಸುಮಾರು ಐವತ್ತು ವರ್ಷಗಳ ಕಾಲ ಮುದ್ರಣ, ಪುನರ್ಮುದ್ರಣಗಳನ್ನು ಕಂಡವು, ಸಹಜವಾಗಿ ಆ ಹೆಸರುಗಳೇ ರೂಢಿಯಲ್ಲಿ ನಿಂತವು. ವೇಂಕಟಮುಖಿ ಮತ್ತು ದೀಕ್ಷಿತರ ಪಂಥದಿಂದ ಹೊರತಾದ ತ್ಯಾಗರಾಜರ ಪಂಥವೊಂದಿದೆ ಎಂದು ಜನ ನಂಬಿದರು. ತ್ಯಾಗರಾಜರ ಕಾಲದ ಆನಂತರ ಪ್ರಚಾರಕ್ಕೆ ಬಂದ ಈ ನಾಮಾವಳಿಯನ್ನು ತ್ಯಾಗರಾಜರ ಹೆಸರಿಗೆ ಕಟ್ಟುವುದು ಎಲ್ಲಿಯ ನ್ಯಾಯ? ಕಾಲ ಗಣನಾ ದೋಷ ಅಲ್ಲವೇ ಅದು, ಯೋಚಿಸಿ ನೋಡು?

ಈ ವಾದವನ್ನು ಒಪ್ಪದೇ ಹೋದಲ್ಲಿ ತ್ಯಾಗರಾಜರು ಉದ್ದೇಶಪೂರ್ವಕವಾಗಿಯೇ ಪರಂಪರಾನುಗತ ವಾಗಿ ಬಂದಿದ್ದ ಸಂಪ್ರದಾಯವನ್ನು ಗಾಳಿಗೆ ತೂರಿ ವಿನಾಕಾರಣ ಗೊಂದಲ ಎಬ್ಬಿಸಿದ್ದಾರೆ ಎಂದು ಹೇಳಬೇಕಾಗುತ್ತದೆ. ಹಾಗೆನ್ನುವುದು ಬುದ್ಧಿಗೇಡಿತನ. ತ್ಯಾಗರಾಜರಂತಹ ನಾದಋಷಿ ಮಾಡುವ ಕೆಲಸವಲ್ಲ ಅದು; ಹುಚ್ಚರ ಕೆಲಸ. ತ್ಯಾಗರಾಜರಿಗೆ ಗುರುವಿನಲ್ಲೂ ಶಾಸ್ತ್ರಪರಂಪರೆಯಲ್ಲೂ ಇದ್ದ ಪೂಜ್ಯಭಾವವನ್ನು ಅವರ ಕೀರ್ತನೆಗಳೇ ಲೋಕಕ್ಕೆ ಸಾರುತ್ತದೆ. ಇಂತಹುದರಲ್ಲಿ ವೇಂಕಟಮುಖಿಯ ಶಿಷ್ಯಪರಂಪರೆಗೆ ಸೇರಿದ ಸೊಂಟಿ ವೆಂಕಟರಮಣಯ್ಯನವರ ಶಿಷ್ಯರಾದ ತ್ಯಾಗರಾಜರು ವೆಂಕಟಮುಖಿಗಳನ್ನೇ ಕಡೆಗೆಣಿಸಹೊರಟರು ಎಂದು ಹೇಳ ಬಹುದೇ?

ಪ್ರಚಾರದಲ್ಲಿದ್ದ ರಾಗಗಳಷ್ಟರ ಬಳಕೆಯಿಂದಲೇ ತೃಪ್ತರಾಗದ ತ್ಯಾಗರಾಜರು ಅನೇಕ ಹೊಸ ರಾಗಗಳನ್ನು ಸೃಷ್ಟಿಸಿದರು. ಈ ರಾಗಗಳಿಗೆ ಬೇಕಾದರೆ ಸಿಂಗರಾಚಾರ್ಯ ಸಹೋದರರು ಇಟ್ಟಿರುವ ಹೆಸರುಗಳನ್ನೇ ಉಳಿಸಿಕೊಳ್ಳೋಣ. ಆದರೆ ತ್ಯಾಗರಾಜರಿಗಿಂತಲೂ ಹಿಂದಿನಿಂದ ಬಂದಿದ್ದ ರಾಗಗಳಿಗೆ ಸಾಂಪ್ರದಾಯಿಕವಾಗಿ ಬಂದ ಹೆಸರುಗಳನ್ನೇ ಉಳಿಸಿಕೊಳ್ಳುವುದು ನ್ಯಾಯ, ಧರ್ಮ. ಅವರ ಕೀರ್ತನೆಗಳನ್ನು ಅವರ ತತ್ವಗಳಿಗೆ ಅನುಸಾರವಾಗಿ ಪ್ರಕಟಿಸುವುದು ಅಗತ್ಯ. ಹಾಗೆ ಮಾಡಿದ್ದೇ ಆದರೆ, ತ್ಯಾಗರಾಜರೂ ದೀಕ್ಷಿತರೂ ವೆಂಕಟಮುಖಿಗಳ ಅನುಯಾಯಿಗಳಲ್ಲಿ ಅಗ್ರಗಣ್ಯರು ಎಂಬುದು ಎದ್ದು ಕಾಣುತ್ತದೆ.

*(ಮುಂದುವರಿಯುತ್ತದೆ)*

**ಶ್ರೀ ಡಿ. ಸುಬ್ಬರಾಮಯ್ಯ ಫೈನ್ ಆರ್ಟ್ಸ್ ಟ್ರಸ್ಟ್ (ರಿ)** : ಜೆ.ಪಿ.ನಗರ, 1ನೇ ಫೇಸ್, ಬೆಂಗಳೂರು, ಶ್ರೀ ಜಯರಾಮ ಸೇವಾ ಮಂಡಲಿ, 8ನೇ ಬ್ಲಾಕ್, ಜಯನಗರದಲ್ಲಿ. ದಿನಾಂಕ 26-3-2000ರಂದು ಸಂಜೆ 6 ಕ್ಕೆ **ಶ್ರೀ ವೈ. ಕೆ. ಮುದ್ದುಕೃಷ್ಣ ಮತ್ತು ವೃಂದದವರಿಂದ** - ಗಾಯನ.

**ಗಿರಿನಗರ ಸಂಗೀತ ಸಭಾ :** ವಿಮಲಶ್ರೀ ಪ್ರವಚನ ಮಂದಿರ, 2ನೇ ಫೇಸ್, ಗಿರಿನಗರ, ಬೆಂಗಳೂರು - 85, ದಿನಾಂಕ 1-4-2000ರಂದು **ವಿದುಷಿ ವಸಂತ ಮಾಧವಿ ಮತ್ತು ವೃಂದದವರಿಂದ** - ಗಾಯನ.

# ಮಧುರ ತಬಲಾ ವಾದಕ ಅಲ್ಲಾರಖಾ



**ಬಿ.ವಿ.ಕೆ. ಶಾಸ್ತ್ರಿ**

ಸುಮಾರು 30-35 ವರ್ಷಗಳ ಹಿಂದೆ ಸಂಗೀತೋತ್ಸವಗಳಿದ್ದುದರಿಂದ ಮದರಾಸಿಗೆ ಹೋಗಿದ್ದೆ. ನಾನು ತಲುಪಿದ ದಿನವೇ ಸಂಜೆ ಮ್ಯೂಸಿಕ್ ಅಕಾಡಮಿ ಬಳಿಗೆ ಯಾರ ಕಛೇರಿ ಇರುವುದೋ ನೋಡಬೇಕೆಂದು ಹೋಗಿದ್ದೆ. ಆಗ ಅಲ್ಲಿಗೆ ರವಿಶಂಕರ್‌ರವರು ಬಂದರು. ಪರಸ್ಪರ ಕುಶಲ ಪ್ರಶ್ನೆ ಇತ್ಯಾದಿ ಆದಮೇಲೆ ಲೋಕಾಭಿರಾಮವಾಗಿ ಮಾತನಾಡುತ್ತಾ ''ನಾಳೆ ಸಂಜೆ ನನ್ನ ಕಛೇರಿ ಇದೆ, ಬೆಳಿಗ್ಗೆ ದಾಸ್ ಪ್ರಕಾಶ್ ಹೋಟೆಲ್ ನಲ್ಲಿ, ನನ್ನ ಕೊಠಡಿಯಲ್ಲಿ ರಿಯಾಜ್ ಮಾಡುತ್ತಿರುತ್ತೇನೆ. ನೀವು ಬರುತ್ತೀರಾ ಎಂದು ಕೇಳಿದರು. ನನಗೂ ಬಿಡುವಿದ್ದುದ್ದರಿಂದ ಆಗಲಿ ಎಂದು ಹೇಳಿದೆ.

ಸುಮಾರು 10 ಗಂಟೆಯ ವೇಳೆಗೆ ಅಲ್ಲಿಗೆ ಹೋದಾಗ ರವಿಶಂಕರ್‌ರವರ ಕೊಠಡಿಯ ಬಾಗಿಲು ಮುಚ್ಚಿತ್ತು. ಒಳಗಿನಿಂದ ಆಹಿರ್ ಭೈರವ ರಾಗದ ಅಲೆಗಳು ಬರುತ್ತಿತ್ತು. ತಬಲ ಮೃದು ಧ್ವನಿಯು ಬರುತ್ತಿತ್ತು. ಬಾಗಿಲು ತಳ್ಳಿ ಒಳಗೆ ಹೋದಾಗ, ರವಿಶಂಕರ್‌ರವರು ಸಿತಾರ್ ನುಡಿಸುತ್ತಿದ್ದರು. ಬಹು ಪ್ರಖ್ಯಾತನಾಗಿದ್ದ ಒಬ್ಬ ತಬಲಾ ವಾದಕ ತಬಲಾ ನುಡಿಸುತ್ತಿದ್ದ. ಲಯಕಾರಿಯಲ್ಲಿ ವಾದ್ಯಗಳ ಪರಸ್ಪರ ಸಂಭಾಷಣೆ ಪ್ರಾರಂಭವಾಯಿತು. ಅದನ್ನು ಈಗ ಸವಾಲ್ ಜವಾಬ್ ಎಂದು ಕರೆಯಲಾಗುತ್ತಿದೆ. ಅಂದರೆ ಮುಖ್ಯ ವಾದ್ಯಕಾರನು ಒಂದು ರಚನೆಯನ್ನು ನುಡಿಸುವುದು, ತಬಲಾದಲ್ಲಿ ಅದೇ ರಚನೆಯ ಪ್ರತಿಬಿಂಬ ಅಥವಾ ಬೇರೆಯ ಸ್ವಾರಸ್ಯವಾದ ರಚನೆಯಿಂದ ಉತ್ತರ ಕೊಡುವುದು. ಈ ಭಾಗದಲ್ಲಿ ರವಿಶಂಕರ್‌ರವರು ಹಿಂದೂಸ್ಥಾನಿಯ ''ಸಂ'' ವಿಧಾನ ಬಿಟ್ಟು ದಕ್ಷಿಣದ ಎಡಪು ರೀತಿಯನ್ನು ಅನುಸರಿಸುತ್ತಿದ್ದರು. ಅದರ ವಾದ್ಯಕಾರನು ಅದನ್ನು ಖಚಿತವಾಗಿ ಗ್ರಹಿಸಲಾಗದೆ ಅವನ ಲಯರಚನೆಗಳು ಎತ್ತ-ಎತ್ತಲಾಗೋ ಹೋಗುವಂತಿದ್ದವು. ರಿಯಾಜ್ ಎಲ್ಲಾ ಆದಮೇಲೆ ತಬಲಾದವನು ಹೊರಟು ಹೊದನು. ನಾವಿಬ್ಬರೇ ಮಾತನಾಡುತ್ತಾ ನಾನು ಪ್ರಶ್ನಿಸಿದೆ. ''ಪಂಡಿತ್‌ಜೀ, ನೀವು ನುಡಿಸುವ ಬಹುತೇಕ ರಚನೆಗಳು ಸರಳವಾಗಿದ್ದವು. ಇಂತಹ ರಚನೆಗಳನ್ನು ಅಲ್ಲಾರಖಾ ತಕ್ಷಣವೇ ಗ್ರಹಿಸುವುದನ್ನು ನಾನು ನೋಡಿದ್ದೇನೆ. ಆದರೆ ಅದು ಈತನಿಗೇಕೆ ಸಾಧ್ಯವಾಗಲಿಲ್ಲ''. ಪಂಡಿತ್‌ಜೀ ಹೇಳಿದರು ''ಅಲ್ಲಾರಖಾ ಅವರಿಗೂ ಇತರ ಅನೇಕ ತಬಲಾ ವಾದಕರಿಗೂ ಇರುವ ಮುಖ್ಯ ವ್ಯತ್ಯಾಸ ಇದೇ''. ಆತನ ಮನಸ್ಸು ಬಹು ಚುರುಕು. ಒಂದು ರೀತಿ ಏಕಸಂಧಿಗ್ರಾಹಿ ಎನ್ನಲೂಬಹುದು. ಬೆರಳುಗಳು ಇನ್ನೂ ಚುರುಕು. ಮನಸ್ಸಿನಲ್ಲಿ ಕಲ್ಪನೆಗಳು ಮೂಡುತ್ತಿರುವಂತೆಯೇ ಬೆರಳುಗಳು ಅದನ್ನು ಶುದ್ಧ ನಾದದಿಂದ ಪ್ರತಿಧ್ವನಿಸುತ್ತವೆ''.

ಇದರ ಪ್ರತ್ಯಕ್ಷ ಅನುಭವ ನನಗೆ ಮೊದಲ ಸಲ ಆದದ್ದು ಸುಮಾರು 40 ವರ್ಷಗಳ ಹಿಂದೆ. ಈಗ ನರಸಿಂಹ ರಾಜೂ ರಸ್ತೆಯ ಹಿಂಭಾಗ ಮೋತಿ ನಗರದಲ್ಲಿದ್ದ ನಜೀರ್ ಅವರ ಮನೆಯಲ್ಲಿ. ಅಂದು ಅವರ ಮನೆಯಲ್ಲಿ ರವಿಶಂಕರ್‌ರವರ ಸಿತಾರ್‌ವಾದನ ಜೊತೆಗೆ ಅಲ್ಲಾರಖಾರವರನ್ನೂ ಕರೆದುಕೊಂಡು ಬಂದಿದ್ದರು. ರಾಗದ ಆಲಾಪನೆಯ ನತರ ಗತ್ ರಚನೆಯನ್ನು ಪ್ರಾರಂಭಿಸಿದರು ರವಿಶಂಕರ್. ವಾದ್ಯ ಸಂಗೀತದಲ್ಲಿ ಗತ್ ಪ್ರಾರಂಭಿಸಿದ ಮೇಲೆ ಅದು ಸ್ವಲ್ಪ ಭದ್ರವಾಗಿ ತಳವೂರಲು ಹತ್ತು ಹದಿನೈದು ಆವರ್ತ ನುಡಿಸುತ್ತಾರೆ. ಆಗ ತಬಲಾದವನು ಸ್ವತಂತ್ರ ರೀತಿಯಲ್ಲಿ ಆ 10-15 ಆವರ್ತಗಳಲ್ಲಿ ವಾದ್ಯವನ್ನು ನುಡಿಸಿ ಇಬ್ಬರೂ ಜೊತೆಗೂಡುತ್ತಾರೆ. ಅಂದು ರವಿಶಂಕರ್‌ರವರು ಗತ್ ಪ್ರಾರಂಭಿಸಿ ಒಂದು ಅರ್ಧ ಮುಕ್ಕಾಲು ಆವರ್ತ ಬಂದಿರಬಹುದು, ಅಲ್ಲಾರಖಾರವರ ಬೆರಳುಗಳಿಂದ ಮಿಂಚಿನಂತೆ ಲಯ ರಚನೆಗಳು ಹರಿದು ಬಂದವು. ಅಲ್ಲಿದ್ದವರಿಗೆಲ್ಲಾ ಶರೀರದಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಅಷ್ಟು ಪ್ರಮಾಣದಲ್ಲಿ ಜನರು ಮುಗ್ಧರಾದರು. ಅನೇಕರು ವಾಹ್ ವಾಹ್ ಅಂದರು. ರವಿಶಂಕರ್‌ರವರು ತೃಪ್ತರಾದಂತೆ ಮುಗುಳ್ನಗೆ ನಗುತ್ತಾ ತಲೆದೂಗಿದರು. ಅಂದಿನಿಂದಾಚೆಗೆ ರವಿಶಂಕರ್‌ರವರ ಜೊತೆಗೆ ಅಲ್ಲಾರಖಾ ತಬಲಾ ವಾದನವಿದ್ದ ಅನೇಕ ಕಚೇರಿಗಳನ್ನು ಕೇಳಿದ್ದೇನೆ. ಆದರೆ ಆ ಮೊದಲ ಸ್ಮೃತಿ ಇಂದೂ ಮನಸ್ಸಿನಲ್ಲಿ ಅಚ್ಚಳಿಯದೇ ನಿಂತಿದೆ.

ಉಸ್ತಾದ್ ಅಲ್ಲಾರಖಾ ಖುರೇಷಿ ಈ ಶತಮಾನದ ಪ್ರಸಿದ್ಧ ತಬಲಾ ವಾದಕರಲ್ಲಿ ಒಬ್ಬರು. ಅವರಿಗೆ ಹುಟ್ಟಿನಿಂದಲೂ ತಾಳ ಲಯಗಳು ಅವರ ರಕ್ತದಲ್ಲಿ ಹರಿಯುತ್ತಿದ್ದಂತೆ ಭಾಸವಾಗುತ್ತಿತ್ತು. ಮಗುವಾಗಿದ್ದಾಗಲೇ ಮನೆಯಲ್ಲಿ ಯಾವ ಲೋಹದ ವಸ್ತುವಾಗಲಿ ಎಳೆದುಕೊಂಡು ಲಯಬದ್ಧವಾಗಿ ಅದನ್ನ ಹೊಡೆಯುತ್ತಿದ್ದರಂತೆ. ತಂದೆ ತಾಯಿಗಳಿಗೆ ಮೊದಲು ಇದು ವಿನೋದವಾಗಿ ಕಾಣುತ್ತಿದ್ದು ಕೊನೆಗೆ ಅತಿಯಾದಾಗ ಮಗುವಿನ ಕೈಗೆ ಯಾವ ಪದಾರ್ಥವೂ ದೊರೆಯದಂತೆ ಮೇಲುಗಡೆ ಇಡುತ್ತಿದ್ದರಂತೆ. ಮಗುವು ಸ್ವಲ್ಪ ಬೆಳೆಯುತ್ತಿದ್ದ ಹಾಗೆ ಹುಡುಗನಲ್ಲಿರುವ

ಈ ಆಕಾಂಕ್ಷೆ ಕಂಡು ಅದನ್ನು ಪ್ರೋತ್ಸಾಹಿಸಲು ಕ್ರಮ ಬದ್ಧ ಶಿಕ್ಷಣಕ್ಕೆ ವ್ಯವಸ್ಥೆ ಮಾಡಲಾಯಿತು. ಆ ಶಿಕ್ಷಣ ನೀಡುತ್ತಿದ್ದವರು ಲಾಲ್‌ಮೊಹಮ್ಮದ್. ಲಾಹೋರಿನ ಸುಪ್ರಸಿದ್ಧ ಖಾದರ್-ಭಷ್‌ರವರ ಶಿಷ್ಯ. ಮುಂದೆ ತರುಣ ಅಲ್ಲಾರಖಾನ ಜೀವನದಲ್ಲಿ ನಾನಾ ತಿರುವುಗಳು. ತನಗೆ ತಾಲೀಮ್ ಕೊಡುತ್ತಿದ್ದ ಲಾಲ್ ಮಹಮ್ಮದ್‌ನ ಗುರು ಖಾದರ್ ಭಕ್ಷ್ ಪಕ್‌ವಾಚೀ ಅವರ ಬಳಿಯಲ್ಲಿಯೇ ಶಿಷ್ಯತ್ವ, ಒಂದು ನಾಟಕ ಕಂಪನಿಯಲ್ಲಿ ಉದ್ಯೋಗ, ಅನಂತರ ಕ್ರಮೇಣ ಮಹಫಿಲ್‌ಗಳಲ್ಲಿ ತಬಲಾ ವಾದಕನಾಗಿ ಭಾಗವಹಿಸಲು ಪ್ರಾರಂಭ. ಅಂದಿನ ಅನೇಕ ಗಾಯಕ ವಾದಕರಿಗೆ ತಬಲಾ ಸಾಥಿಯಾಗಿ ಪಾಲ್ಗೊಂಡಿದ್ದರು ಮುಂದೆ ಆಲ್ ಇಂಡಿಯಾ ರೇಡಿಯೋದಲ್ಲಿ ಉದ್ಯೋಗ. ಕೆಲವು ವರ್ಷಗಳ ನಂತರ ಅದನ್ನೂ ಬಿಟ್ಟು ಚಲನ ಚಿತ್ರಗಳಿಗೆ ಖುರೇಷಿ ಎಂಬ ಹೆಸರಿನಲ್ಲಿ ಸಂಗೀತ ನಿರ್ದೇಶಕ. ಹೀಗೆ ನಡೆದುಕೊಂಡು ಬಂದಿತು. ಮುಂದೆ ಪಂಡಿತ್ ರವಿಶಂಕರ್ ಅವರ ಜೊತೆಗೂಡಿದ ಮೇಲೆ ಅಲ್ಲಾರಖಾರವರ ಜೀವನದಲ್ಲಿ ಒಂದು ಹೊಸ ಅಧ್ಯಾಯವೆ ಪ್ರಾರಂಭವಾಯಿತು. ಭಾರತದಲ್ಲಷ್ಟೇ ಅಲ್ಲದೆ ವಿದೇಶಗಳಿಗೂ ಅಲ್ಲಾರಖಾರವರನ್ನು ತಬಲಾ ಸಾಥಿಯಾಗಿ ಜೊತೆಯಲ್ಲಿಯೇ ಕರೆದುಕೊಂಡು ಹೋದರು. ಇದು ಅವರಿಗೆ ಅಂತರ ರಾಷ್ಟ್ರೀಯ ಖ್ಯಾತಿಯನ್ನು ತರುವಂತಾಯಿತು. ರವಿಶಂಕರ್‌ರವರ ಜೊತೆಯಲ್ಲಿ ಅನೇಕ ಪ್ರತಿಷ್ಠಿತ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. ಅವುಗಳೂ ಬಹು ಸಂಖ್ಯೆಯಲ್ಲಿ. ಅವುಗಳಲ್ಲಿ ಕೆಲವನ್ನು ಮಾತ್ರ ಉದಾಹರಿಸಲಾಗಿದೆ.

ಮೊದಲನೆಯದಾಗಿ ಸುಮಾರು 35 ವರ್ಷಗಳ ಹಿಂದೆ ಪ್ರಪಂಚ ಸಂಸ್ಥೆಯಲ್ಲಿ ನಡೆದ ರವಿಶಂಕರ್ ಮತ್ತು ಎಹುದಿ ಮಹುದಿನ್‌ರವರ ಜೋಡಿ ವಾದ್ಯ ಕಚೇರಿಗೆ ತಬಲಾ ವಾದನ ನೀಡಿದವರು ಅಲ್ಲಾರಖಾ. ಇನ್ನೊಂದು ಸಂದರ್ಭ ಸುಪ್ರಸಿದ್ಧ ಬೀಟಲ್ಸ್ ತಂಡದವರು ಸಂಗೀತಗಾರರಿಗೆ ಮತ್ತು ಸಂಗೀತಪ್ರಿಯರಿಗೆ ಪ್ರತ್ಯೇಕವಾಗಿ ಏರ್ಪಡಿಸಿದ್ದ ರವಿಶಂಕರ್‌ರವರ ಕಚೇರಿ. ಅದರಲ್ಲಿ ಅಲ್ಲಾರಖಾರವರ ವಾದನ ಬಹು ಮನೋಜ್ಞವಾಗಿತ್ತು. ಹಾಗೆಯೇ ರವಿಶಂಕರ್‌ರವರು ಭಾಗವಹಿಸಿದ ಅಂತರರಾಷ್ಟ್ರೀಯ ಮಟ್ಟದ ಎಲ್ಲ ಸಂಗೀತ ಉತ್ಸವಗಳಿಗೂ ಅಲ್ಲಾರಖಾರವರು ತಬಲಾ ಸಾಥಿ ನೀಡಿ ಪ್ರಶಂಸೆಗಳಿಸಿದರು.

ಅಲ್ಲಾರಖಾ ಸದಾ ಹಸನ್ಮುಖಿ. ಖುಷಿಯಿಂದ ನಗುನಗುತ್ತಾ ಮಾತನಾಡುವುದು ಅವರ ಸ್ವಭಾವ. ವೇದಿಕೆ ಮೇಲೆ ಅವರನ್ನು ನೋಡಿದಾಗ ಒಂದು ಬುದ್ಧ ವಿಗ್ರಹ ನೆನಪಿಗೆ ಬರುತ್ತಿತ್ತು. ಅವರ ಬಗ್ಗೆ ಅನೇಕ ಬಾರಿ ನಾನೆ `laughing Buddha' ಎಂದು ಬರೆದಿದ್ದೇನೆ. ಅವರು ಅದನ್ನು ಓದಿ ನಗುತ್ತಿದ್ದರು. ಅವರ ವಾದನದಲ್ಲಿ ಹಿಂದೆಯೇ ಹೇಳಿದಂತೆ ನುಡಿಕಾರಗಳು ಸರಪೋಣಿಸಿದಂತೆ ಮಿಂಚಿನ ವೇಗದಲ್ಲಿ ಚಿಮ್ಮಿ ಬರುತ್ತಿದ್ದವು. ಅದೂ ನಿರಾಯಾಸವಾಗಿ. ಬಹು ಕ್ಲಿಷ್ಟವಾದ ರಚನೆಗಳು, ಶುದ್ಧ ನಾದ ಪೂರಿತವಾಗಿಯೂ, ಲಾಲಿತ್ಯದಿಂದಲೂ ಕೂಡಿರುತ್ತಿದ್ದವು. ಅವರನ್ನು ನಾನು ಸಂಧಿಸಿದಾಗೆಲ್ಲ ಅವರ ಚಿತ್ರಗಳಿಗೆ ಸಂಗೀತ ನಿರ್ದೇಶನ ಮಾಡುತ್ತಿದ್ದ ಹೆಸರಿನಿಂದ ಅಂದರೆ 'ಖುರೇಷಿ ಸಾಬ್' ಎಂದು ಕರೆಯುತ್ತಿದ್ದೆ. ಅದು ಅವರಿಗೆ ಒಂದು ರೀತಿಯ ಜೋಕ್ ನಗುತ್ತಿದ್ದರು. ಅವರಿಗೆ ರವಿಶಂಕರ್‌ರವರ ಬಗ್ಗೆ ಬಹಳ ಅಭಿಮಾನ. ಹಿಂದೂಸ್ಥಾನಿ ಸಂಗೀತದಲ್ಲಿ ನಮ್ಮ ತಬಲಾವಾದಕನು ಎಷ್ಟೇ ಪ್ರತಿಭಾವಂತನಾಗಿರಲಿ, ಅವನನ್ನು ಮರ್ಯಾದೆಯಿಂದ ಕಾಣುತ್ತಿರಲಿಲ್ಲ. ರವಿಶಂಕರ್‌ರವರಿಂದ ಈ ಸ್ಥಿತಿ ಬದಲಾಯಿತು. ಅವರು ತಬಲಾವಾದಕರಿಗೆ ಒಂದು ಮರ್ಯಾದೆ ಮತ್ತು ಯುಕ್ತವಾದ ಸ್ಥಾನವನ್ನು ತಂದರು. ಅವರ ಕಚೇರಿಗಳಲ್ಲಿ ತಬಲಾ ವಾದಕನನ್ನು ಸಮಸಮವಾಗಿ ಅದೇ ಸಾಲಿನಲ್ಲಿ ಕೂರಿಸಿಕೊಳ್ಳುತ್ತಿದ್ದರು. ಅವರನ್ನು ನೋಡಲು ಬಂದ ಘನ ವ್ಯಕ್ತಿಗಳ ಪರಿಚಯವನ್ನು ಮಾಡಿಸುತ್ತಿದ್ದರು. ಹಿಂದೂಸ್ಥಾನಿ ಸಂಗೀತದಲ್ಲಿ ಇಂದು ತಬಲಾದವಾದಕರು ಧೈರ್ಯವಾಗಿ ತಲೆಎತ್ತಿಕೊಂಡು ಗೌರವಯುತ ಸ್ಥಾನ ಪಡೆಯುವುದಕ್ಕೆ ರವಿಶಂಕರ್‌ರವರೇ ಕಾರಣವೆಂದು ಬಹು ಹೃದಯವಂತಿಕೆಯಿಂದ ಹೇಳುತ್ತಿದ್ದರು.

ಸಾಕಷ್ಟು ವರ್ಷ ಈ ರೀತಿ ಅಂತರ ರಾಷ್ಟ್ರೀಯ ಮಟ್ಟದ ಕೀರ್ತಿಯನ್ನು ಗಳಿಸಿದ ಮೇಲೆ ಅಲ್ಲಾರಖಾರವರು ಬೊಂಬಾಯಿನ ನಿಷಿಯಾನ್‌ಸೀ ರೋಡಿನಲ್ಲಿ ಸ್ವಂತ ಗೃಹದಲ್ಲಿ ನೆಲೆಸಿ, ಆಸಕ್ತರಿಗೆ ವಿದ್ಯಾದಾನ ಮಾಡಲು ಆರಂಭಿಸಿದರು. ಅವರಲ್ಲಿ ತಯಾರಾದ ಅನೇಕರು ಪ್ರತಿಭಾವಂತರಿದ್ದಾರೆ. ಏಕೆ, ಅವರ ಮಗ ಜಾಕಿರ್ ಹುಸೇನ್ ಇಲ್ಲವೆ ! ಈಚೆಗೆ ವಯೋಧರ್ಮದಿಂದ ಹೆಚ್ಚಿನ ಕಾರ್ಯಕಲಾಪಗಳಿಗೆ ಅಂಟಿ ಕೊಳ್ಳುತ್ತಿರಲಿಲ್ಲ. ಅವರಿಗೆ ಕರ್ನಾಟಕ ಸರ್ಕಾರದ 1999ನೇ ಸಾಲಿನ ಟಿ. ಚೌಡಯ್ಯ ಪ್ರಶಸ್ತಿಯನ್ನು ನೀಡಲಾಯಿತು. ಅದನ್ನು ಸ್ವೀಕರಿಸಲು ಬಂದಾಗಲೆ ಅವರಿಗೆ ಆರೋಗ್ಯ ಸರಿಯಾಗಿರಲಿಲ್ಲ. ಅಂತೂ ಹೇಗೋ ಅದನ್ನು ಸ್ವೀಕರಿಸಿ ಊರಿಗೆ ಹಿಂತಿರುಗಿದ ಒಂದು ವಾರದಲ್ಲಿ ನಿಧನರಾದದು ದುರದೃಷ್ಟಕರ. ಅವರು ನಿಧನರಾಗುವುದಕ್ಕೆ ಕೆಲವು ಗಂಟೆಗಳ ಹಿಂದೆ ಅವರ ಪುತ್ರಿಯೂ ನಿಧನರಾದರು. ಅವರು ಹಿಂದೂಸ್ಥಾನಿಯ ಸಂಗೀತದ ಅಹಮದ್‌ಜಾನ್ ತಿರಕ್‌ವಾ, ಜಹಂಗೀರ್ ಖಾನ್ ಮುಂತಾದ ಖ್ಯಾತಿವೆತ್ತ ತಬಲಾವಾದಕರ ಪಂಕ್ತಿಗೆ ಸೇರಬೇಕಾದವರು.

## ವಿಷಯ ವ್ಯಕ್ತಿ



# ವಿಷಯ : ಯುಗಳಗಾನ

## ವ್ಯಕ್ತಿ : ವಿದ್ವಾನ್ ಬಳ್ಳಾರಿ ಎಂ. ವೆಂಕಟೇಶಾಚಾರ್

### ಸಂದರ್ಶಕರು : ಶ್ರೀಕಾಂತಂ ನಾಗೇಂದ್ರಶಾಸ್ತ್ರೀ

*॥ಇಂಚರವತ್ತಿತ್ತ ಜಾರದೆ ರಾಗದ ಮಿಂಚು ಮಾಸದೆ ಸೊಬಗೆಯರು*
*ಪಂಚಗುರುಗಳ ಪಾಡಿದರು ಪಾತಕ ಹರಿ ಹಂಚಾಗಿ ಹರಿದು ಹೋದಂತೆ॥*

ಎಂದು ಯುಗಳ ಗಾಯನವನ್ನು ವರ್ಣಿಸುವಾಗ ಹೇಳುತ್ತಾನೆ ರತ್ನಾಕರವರ್ಣಿ. ಯುಗಳ ಗಾಯನವು ಭಾರತೀಯ ಸಂಗೀತದಲ್ಲಿ ಪ್ರಾಚೀನವಾದದ್ದೇ. ಶ್ರೀಮದ್ರಾಮಾಯಣದಲ್ಲಿ 'ತಂತ್ರೀಲಯಸಮನ್ವಿತ'ವಾಗಿ ಗಾಯನ ಮಾಡಿದ ಲವ- ಕುಶರೇ ಆಗಲಿ, ವೈಷ್ಣವ ಪುರಾಣಗಳಲ್ಲಿನ ತುಂಬುರು ನಾರದರೇ ಆಗಲಿ, ಶೈವ ಪುರಾಣಗಳಲ್ಲಿನ ಕಂಬಳಾಶ್ವತರೇ ಆಗಲಿ, ಜೈನರ ನೇಮಿನಾಥ ಪುರಾಣದಲ್ಲಿನ ವಿಜಯ-ಜಯಸೇನೆಯರೇ ಆಗಲಿ, ಇವರೆಲ್ಲರೂ ಪ್ರಾಚೀನ ಭಾರತೀಯ ಸಂಗೀತದ ಅಮರ ಜೋಡಿಗಳು. 'ಎಕ್ಕಲಗಾಣ'ದಂತೆ 'ಗೊಟ್ಟಿ' ಗಾಯನ, ಜಂಟಿಗಾಯನಗಳು ನಮ್ಮ ಅನೇಕ ಕಾವ್ಯಗಳಲ್ಲಿ ಕಂಡು ಬರುತ್ತದೆ.

ಕರ್ನಾಟಕ ಸಂಗೀತ ಪದ್ಧತಿಯಲ್ಲಿ ಈ ರೀತಿಯ ಅನೇಕ ಜೋಡಿಗಳು ತಮ್ಮ ವೈಶಿಷ್ಟ್ಯತೆಯನ್ನು ಮೆರೆದಿವೆ. ಆಗ್ಗೆ ಕರ್ನಾಟಕದಲ್ಲಿ ಯುಗಳಗಾಯನ ಜೋಡಿಗಳಲ್ಲಿ ಅಗ್ರ ಪಂಕ್ತಿಯಲ್ಲಿದ್ದವರು 'ಬಳ್ಳಾರಿ ಸಹೋದರರು' ಎಂದು ಖ್ಯಾತರಾಗಿರುವ ಬಳ್ಳಾರಿ ಎಂ. ವೆಂಕಟೇಶ್ ಆಚಾರ್ ಹಾಗೂ ದಿ॥ ಶೇಷಗಿರಿ ಆಚಾರ್ಯರು. ವೆಂಕಟೇಶ್ ಆಚಾರ್ 1933ರಲ್ಲೂ, ಶೇಷಗಿರಿ ಆಚಾರ್ 1935ರಲ್ಲೂ ಜನಿಸಿದರು. ಇವರ ತಂದೆ ರಾಘವೇಂದ್ರಾಚಾರ್ಯರು ಮದ್ರಾಸಿನ ಕ್ವೀನ್ ಮೇರೀಸ್ ಕಾಲೇಜಿನಲ್ಲಿ ಸಂಗೀತ ಅಧ್ಯಾಪಕರಾಗಿದ್ದರು. ಬಳ್ಳಾರಿ ಸಹೋದರರು ತಮ್ಮ 14, 12ನೆಯ ವಯಸ್ಸಿನಲ್ಲೇ ಸಂಗೀತ ಕಛೇರಿಗಳನ್ನು ನೀಡಲು ಪ್ರಾರಂಭಿಸಿ ದೇಶಾದ್ಯಂತ ಎಲ್ಲಾ ಹೆಸರಾಂತ ಪಕ್ಕವಾದ್ಯಗಳೊಂದಿಗೆ ಹಾಡಿ ಪ್ರಶಂಸೆಗೆ ಪಾತ್ರರಾದವರು. ವೆಂಕಟೇಶಾಚಾರ್‌ರಿಗೆ ಹಾರ್ಮೋನಿಯಂ, ಖಂಜರಿಗಳಲ್ಲಿ ಪರಿಶ್ರಮವಿದ್ದರೆ ಶೇಷಗಿರಿ ಆಚಾರ್ಯರು ಪಿಟೀಲಿನಲ್ಲಿ ಪರಿಶ್ರಮದ ಜೊತೆಗೆ ಉತ್ತಮ ವಾಗ್ಗೇಯಕಾರರೂ ಆಗಿದ್ದವರು. ಶೇಷಗಿರಿ ಆಚಾರ್‌ರ ಅಕಾಲಿಕ ನಿಧನದ ನಂತರ ವೆಂಕಟೇಶಾಚಾರ್ಯರು ತನಿಯಾಗಿ ಕಾರ್ಯಕ್ರಮಗಳನ್ನು ನೀಡುತ್ತಾ ಬಂದಿದ್ದಾರೆ. 'ಯುಗಳ ಗಾಯನ'ದಲ್ಲಿ ಅವರಿಗಿರುವ ಅಪಾರ ಸಾಧನೆ-ಅನುಭವಗಳ ಹಿನ್ನಲೆಯಲ್ಲಿ 'ಯುಗಳಗಾಯನ'ವೆಂಬ ವಿಷಯದ ಬಗ್ಗೆ ವೆಂಕಟೇಶ ಚಾರ್ಯರೊಂದಿಗೆ ಚರ್ಚಿಸಲಾಗಿದೆ.

***ನಿಮ್ಮ ಯುಗಳಗಾಯನ ಕಛೇರಿ ಪ್ರಾರಂಭವಾದದ್ದು ಎಂದು? ಎಷ್ಟು ಕಛೇರಿಗಳನ್ನು ನೀವಿಬ್ಬರು ಸೇರಿ ನೀಡಿದ್ದೀರಿ? ಅದರಲ್ಲಿ ತುಂಬಾ ತೃಪ್ತಿಕೊಟ್ಟ ಕಛೇರಿಗಳು ಯಾವುವು?***

ನಮ್ಮ ಈ ಕಛೇರಿ ಜೀವನ ಪ್ರಾರಂಭವಾದದ್ದು 1947ರಲ್ಲಿ. ನಂತರ ನನ್ನ ತಮ್ಮ ಸಾಯುವ ತನಕ ಇಬ್ಬರೂ ಸೇರಿ ಸಾವಿರಾರು ಕಛೇರಿಗಳನ್ನು ಮಾಡಿದೆವು. ಬೆಂಗಳೂರಿನಲ್ಲಿ ಪಾಲ್ಘಾಟ್ ಮಣಿ ಅಯ್ಯರ್ ನುಡಿಸಿದ ಕಛೇರಿ, ಕೊಯಮತ್ತೂರಿನಲ್ಲಿ ಹಾಡಿದಾಗ ಚಂಬೈ ಅಲ್ಲಿಗೆ ಬಂದು ಸಂಗೀತ ಕೇಳಿದ್ದು, ಅಷ್ಟೇ ಅಲ್ಲದೆ ಒಮ್ಮೆ ಶಿವಮೊಗ್ಗದಲ್ಲಿ (1968) ಇಬ್ಬರಿಗೂ ಒಳ್ಳೆಯ ಮನೋಧರ್ಮ ಬಂದು ಏಳೋ ಏಳೂವರೆ ಗಂಟೆಯೋ ಹಾಡಿದೆವು ಆ ಕಛೇರಿಯಂತೂ ಮರೆಯೋಕೆ ಸಾಧ್ಯವೇ ಇಲ್ಲ. ಸಂಜೆ 6. 15ಗಂಟೆಗೆ ಪ್ರಾರಂಭವಾದ ಕಛೇರಿ ಮುಗಿದಾಗ ರಾತ್ರಿ ೩ ಗಂಟೆ !

***ನೀವಿಬ್ಬರೂ ಹಾಡಲು ಮೊದಲು ಪ್ರಾರಂಭಿಸಿದ್ದು ಒಂದು ಪ್ರಯೋಗವಾಗಿಯೋ ಅಥವಾ ಅದರಲ್ಲೇನಾದರೂ ಅನಿವಾರ್ಯತೆಯಿತ್ತೋ?***

ಚಿಕ್ಕಂದಿನಿಂದಲೂ ಜೊತೆಯಾಗಿಯೇ ಇರುತ್ತಿದ್ದೆವು. ಅಭ್ಯಾಸವೂ ಒಟ್ಟೊಟ್ಟಿಗೆ ನಡೆಯುತ್ತಿತ್ತು. ಹೀಗಾದ್ದರಿಂದ ನಮ್ಮಣ್ಣನವರಾದ ನರಸಿಂಹಮೂರ್ತಿಗಳು ನಮ್ಮಿಬ್ಬರನ್ನೂ ಒಟ್ಟಿಗೆ ಸೇರಿ ಕಛೇರಿ ಮಾಡಲು ಹೇಳಿದರು. ಆಗ ಬಳ್ಳಾರಿ ಸಹೋದರರು ಎನ್ನುವ ಹೆಸರಿನಿಂದ ಕಛೇರಿಗಳು ಪ್ರಾರಂಭವಾಗಿ ಶೀಘ್ರದಲ್ಲೇ ಬಳ್ಳಾರಿ ಕಡೆಯ ಆದವಾನಿ, ಆಲೂರು, ಮಂತ್ರಾಲಯ, ಅನಂತಪುರ, ಕರ್ನೂಲು ಈ ಕಡೆಯೆಲ್ಲಾ ಪ್ರಸಿದ್ಧರಾದೆವು.

***ಯುಗಳ ಗಾಯನದಲ್ಲಿ ವಯಸ್ಸಿನ ಅಂತರವೂ ಮುಖ್ಯ ಪಾತ್ರವನ್ನು ವಹಿಸುತ್ತದಯೇ?***

ಸಮವಯಸ್ಸಿನವರು, ಅಥವಾ ನಾಲ್ಕೈದು ವರ್ಷಗಳ ಅಂತರದಲ್ಲಿರುವವರಿದ್ದರೆ ಚೆನ್ನ. ಆದರೆ ಇದೇ ಯುಗಳ ಗಾಯನಕ್ಕೆ ಬಹು ಮುಖ್ಯ ಅಗತ್ಯವೇನಲ್ಲ. ಕೆಲವೊಮ್ಮೆ ತಂದೆ-ಮಗನ ಯುಗಳಗಾಯನವೂ ಶೇಷಾದ್ರಿಪುರದ ರಾಮೋತ್ಸವದಲ್ಲಿ ನಡೆದಿದ್ದುಂಟು. (ಆ ಕಲಾವಿದರ ಹೆಸರು ಜ್ಞಾಪಕಕ್ಕೆ ಬರಲಿಲ್ಲ). ಜ್ಞಾನದಿಂದ ಒಂದೇ ಮಟ್ಟದಲ್ಲಿದ್ದರೆ ಸಾಕು. ಆದರೆ ಒಂದೇ ವಯಸ್ಸಿನ ಸಾಮೀಪ್ಯದಲ್ಲಿ ಅಭಿರುಚಿ, ಸ್ನೇಹ, ಮಾತುಕತೆಗಳಲ್ಲಿ ಒಳ್ಳೆಯ ಹೊಂದಾಣಿಕೆ ಬರುತ್ತದೆ.

***ಯುಗಳ ಗಾಯನವನ್ನು ಹಾಡುವಾಗ ಕಛೇರಿಯನ್ನು ಹೇಗೆ ಯೋಜಿಸಬೇಕು?***

ಇದಕ್ಕೆ ಮುಂಚೆ ಯುಗಳಗಾಯನದಲ್ಲಿ ಬರಬಹುದಾದ ಅನೇಕ ತೊಂದರೆಗಳನ್ನು ಮೊದಲು ಗಮನಿಸಿದರೆ, ಈ ಪ್ರಶ್ನೆಗೆ ಉತ್ತರ ಸಿಗುತ್ತದೆ. ಮೊಟ್ಟಮೊದಲು ಇಬ್ಬರ ಹಾಡಿಕೆಯೂ 'ಸಿಂಕ್ರನೈಸ್' ಆಗಬೇಕು. ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯುವಂತಿರಬಾರದು. ಇದಕ್ಕಾಗಿ ಹೆಚ್ಚಿನ ಅಭ್ಯಾಸ ಬೇಕು. ವೈಯಕ್ತಿಕ ಭಿನ್ನಾಭಿಪ್ರಾಯಗಳಿರಬಾರದು. ಇದ್ದರೂ ಅದನ್ನು ವೇದಿಕೆಯಲ್ಲಿ ತೋರಿಸಬಾರದು. ಒಬ್ಬರನ್ನೊಬ್ಬರು ಸಮಯಕ್ಕೆ ತಕ್ಕಂತೆ ಅನುಸರಿಸಿಕೊಂಡು ಹೋಗುವ ಬುದ್ಧಿ ಇರಬೇಕು. ಹೀಗೆಲ್ಲಾ ಅಂಶಗಳು ಸೇರಿದರೆ 'ಯುಗಳ ಗಾಯನ'ದ ಜೋಡಿ ತಕ್ಕ ಮಟ್ಟಿಗೆ ಸಿದ್ಧವಾಗುತ್ತದೆ. ಈ ರೀತಿಯ ಜೋಡಿಗಳು ಕಛೇರಿ ಮಾಡುವಾಗ ಕಛೇರಿಯನ್ನು 'ಪ್ಲಾನ್' ಮಾಡುವುದು ವಿಭಿನ್ನವಾಗಿಯೇ ಇರುತ್ತದೆ. ಕಛೇರಿಗಳಲ್ಲಿ ಸಾಮಾನ್ಯವಾಗಿ ಹಾಡುವ ವರ್ಣ, ಕೃತಿ ಇತ್ಯಾದಿಗಳ ಜೊತೆಗೆ ಕಛೇರಿಯ ಮುಖ್ಯ ಎರಡು ಭಾಗಗಳನ್ನು ಯಾರು ಯಾರು ಯಾವಾಗ ಹಾಡಬೇಕು? ಒಬ್ಬೊಬ್ಬರು ಒಂದೊಂದು ರಾಗವನ್ನೊ, ಅಥವಾ ಒಂದೇ ರಾಗವನ್ನು ಇಬ್ಬರೂ ಹಾಡುವಂತಿದ್ದರೆ ಯಾರು ಯಾವ ಹಂತದವರೆಗೆ ಹಾಡಬೇಕು? ಇವುಗಳನ್ನೆಲ್ಲಾ ಸರಿಯಾಗಿ ಅರ್ಥೈಸಿಕೊಳ್ಳಬೇಕು. ಈ ಮಾತು ಸ್ವರ, ಕೊರಪು, ಮುಕ್ತಾಯ ಇವುಗಳಿಗೂ ಅನ್ವಯಿಸುತ್ತದೆ. ಪಲ್ಲವಿಯೇನಾದರೂ ಹಾಡುವುದಿದ್ದರೆ ನೆರವಲ್ ಇತ್ಯಾದಿಗಳನ್ನು ಬೇರೆಯಾಗಿ ಮಾಡಿ, ತ್ರಿಕಾಲವನ್ನು ಒಟ್ಟಿಗೆ ಮಾಡಬೇಕು.

***ಈ ಪರಸ್ಪರ ಸಹಕಾರ ಹೊಂದಾಣಿಕೆಗಳ ಜೊತೆಯಲ್ಲಿ ಇಬ್ಬರ ನಡುವೆ ಕೊಂಚ ಸ್ಪರ್ಧೆ, ಹುರುಡಿಸುವಿಕೆ ಯಿದ್ದರೆ ಚೆನ್ನವಲ್ಲವೇ?***

ನಿಜ, ಹೊಂದಾಣಿಕೆಯ ಜೊತೆ ಸ್ಪರ್ಧೆಯೂ ಬೇಕು. ಆದರೆ ಈ ಸ್ಪರ್ಧೆ ಆರೋಗ್ಯಕರವಾಗಿದ್ದರೆ ಅದರಿಂದ ಒಳ್ಳೆಯ ಸಂಗೀತ ಬರುತ್ತದೆ. ಇಲ್ಲದಿದ್ದರೆ ಕೋಟೆ ಹತ್ತುವವರು ಪರಸ್ಪರ ಕಾಲೆಳೆದುಕೊಂಡಂತಾಗಿ ಆಭಾಸವಾಗುತ್ತದೆ. ಸ್ಪರ್ಧೆಯಾಗಲೀ, ಸಹಕಾರವಾಗಲೀ ಇವು ಒಳ್ಳೆಯ ಸಂಗೀತ ನೀಡುವುದಕ್ಕಾಗಿಯೇ ಇರಬೇಕು.

***'ಯುಗಳ ಗಾಯನದಲ್ಲಿ ಗಾಯಕನ ಮನೋಧರ್ಮ ಸ್ವಾತಂತ್ರ್ಯಕ್ಕೆ ಹೆಚ್ಚಿಗೆ ಆಸ್ಪದವಿರುವುದಿಲ್ಲ' ಎಂಬ ಅಭಿಪ್ರಾಯವಿದೆ. ಇದಕ್ಕೆ ನಿಮ್ಮ ಉತ್ತರವೇನು?***

ಒಂದು ರೀತಿ ನಿಜ. ಇಬ್ಬರ ಮನೋಧರ್ಮಕ್ಕೂ ಆಸ್ಪದವಿದ್ದರೂ ಅದಕ್ಕೆ ಒಂದು ಗಡಿ ಇರುತ್ತದೆ. ನಮ್ಮದೇ ಉದಾಹರಣೆಯನ್ನು ಕೊಟ್ಟು ಹೇಳುವುದಾದರೆ ಕೆಲವೊಮ್ಮೆ ನಾನು ಹಿಂದೋಳ, ಮೋಹನ ಇತ್ಯಾದಿ ರಾಗಗಳನ್ನು ವೇದಿಕೆಯಲ್ಲಿ ಹಾಡುತ್ತಿದ್ದಾಗ, ಶೇಷಗಿರಿಗೆ ಮನೋಧರ್ಮ ಬಂದು ಕೆಲವು ಸಂಗತಿ, ಬಿರ್ಕಾ ಮೊದಲಾದವನ್ನು ಹಾಡಿಬಿಡುತ್ತಿದ್ದ. ಆಗ ನಾನು ಅವನಿಗೆ 'ಸಪೋರ್ಟ್' ಮಾಡಿ ಷಡ್ಜದಲ್ಲಿ ಕಾರುವೆಕೊಟ್ಟು ನಿಲ್ಲುತ್ತಿದ್ದೆ. ಅದು ಮುಗಿದ ಮೇಲೆ ಮತ್ತೆ ಮುಂದುವರಿಸುತ್ತಿದ್ದೆ. ಹೀಗಿರುವಾಗ ಯುಗಳ ಗಾಯನದಲ್ಲಿ ಒಬ್ಬ ಹಾಡುತ್ತಿದ್ದಾಗ ಇನ್ನೊಬ್ಬನಿಗೆ ಮನೋಧರ್ಮ ಬಂದಾಗ ತಡೆದು ಕೊಂಡಿರಬೇಕೆಂದೇನೂ ಇಲ್ಲ. ಕೆಲವು ಚೆನ್ನಾದ ಸಂಗತಿಗಳನ್ನು ಒಬ್ಬನಿಗೆ ಮತ್ತೆ

ಪುನರಾವರ್ತನೆ ಮಾಡಬೇಕೆನಿಸಿದಾಗ ಸೂಚನೆ ಸಂಜ್ಞೆಗಳಿಂದಲೋ ಅಥವಾ ಮೀರಿ ಹಾಡುವುದರ ಮೂಲಕವೋ ತೋರಿಸಿದರೆ ನಷ್ಟವೇನೂ ಇಲ್ಲ. ಕೇಳುಗರಿಗೆ ತೊಂದರೆ ಯಾಗದಂತೆ ಏನೇ ಮನೋಧರ್ಮದ ಕೆಲಸ ಮಾಡಿದರೂ ಸೊಗಸಾಗಿಯೇ ಇರುತ್ತದೆ. ಒಟ್ಟಿನಲ್ಲಿ ಯುಗಳ ಗಾಯನದಲ್ಲಿ ಮನೋಧರ್ಮಕ್ಕೆ ಚೆನ್ನಾಗಿಯೇ ಅವಕಾಶವಿದೆ. ಆದರೆ ಅದಕ್ಕೊಂದು ಚೌಕಟ್ಟಿದೆ. ಅಷ್ಟೆ.



*1981ರಲ್ಲಿ ತ್ಯಾಗರಾಜ ಗಾನಸಭೆಯಲ್ಲಿ ನಡೆದ ಬಳ್ಳಾರಿ ಸಹೋದರರ ಕಛೇರಿ*

**ಎಷ್ಟೋ ಜೋಡಿಗಳಲ್ಲಿ ಇಬ್ಬರು ಗಾಯಕರಿದ್ದರೂ ಒಬ್ಬರೇ ಪ್ರಧಾನವಾಗಿ ಬಿಡುವ ಸಾಧ್ಯತೆ ಯಿಲ್ಲವೇ?**

ಆ ಸಾಧ್ಯತೆಯಿದೆ, ಒಂದೇ ಮಟ್ಟದ ಇಬ್ಬರು ಗಾಯಕರಿದ್ದರೂ ಒಬ್ಬೊಬ್ಬರಿಗೆ ಒಂದೊಂದು ವೈಶಿಷ್ಟ್ಯ ಒಂದೊಂದು 'ವೀಕ್‌ನೆಸ್' ಇರುತ್ತದೆ. ಎರಡೂ ಒಂದಕ್ಕೊಂದು ಪೂರಕವಾಗಿ ಬಿಟ್ಟರೆ ಈ ರೀತಿ ಆಗುವ ಸಾಧ್ಯತೆ ಕಡಿಮೆ. ಈಗ ನಮ್ಮ ಉದಾಹರಣೆಯನ್ನೇ ತೆಗೆದುಕೊಳ್ಳಿ, ನನ್ನದು ಗಮಕ ಯುಕ್ತ, ಶೇಷಗಿರಿಯದು ಬಿರ್ಕಾಯುಕ್ತವಾದದ್ದು. ಇವೆರಡು ಹದವಾಗಿ ಸೇರುತ್ತಿದ್ದರಿಂದ ಯಾವುದೇ ವೈಯಕ್ತಿಕ ಪ್ರಾಧಾನ್ಯಕ್ಕೆ ಅವಕಾಶ ವಿರುತ್ತಿರಲಿಲ್ಲ. ಹೀಗಿಲ್ಲದಿದ್ದರೆ ಒಬ್ಬನಿಗೆ ಇನ್ನೊಬ್ಬನದು ಬರೀ ನಾಗಸ್ವರದ ಹಿಂದಿನ ಶ್ರುತಿಯ ಮೇಳದಂತೆ ಆಗಿ ಬಿಡುತ್ತದೆ. ಜೊತೆಗೆ ಇನ್ನೂ ಒಂದು ವಿಷಯ. ಒಮ್ಮೊಮ್ಮೆ ಒಂದೇ ಯೋಗ್ಯತೆಯ ಗಾಯಕರಿದ್ದರೂ ಆ ದಿನ ಯಾರಾದರೂ ಒಬ್ಬನಿಗಿಂತ ಇನ್ನೊಬ್ಬ ಚೆನ್ನಾಗಿ ಹಾಡಿ ಚಪ್ಪಾಳೆ ಗಿಟ್ಟಿಸಿದ ಎಂದುಕೊಳ್ಳೋಣ, ಆಗ ಅದನ್ನು ತಪ್ಪಾಗಿ ಇನ್ನೊಬ್ಬ ಭಾವಿಸಬಾರದು. ಅದು ತಮ್ಮ ತಂಡಕ್ಕೆ ಸಂದ ಗೌರವ ಎಂದುಕೊಳ್ಳುವುದೇ ಉಚಿತ.

**ಯುಗಳ ಗಾಯನಕ್ಕೆ ಯಾರಿದ್ದರೆ ಚೆಂದ? ಸೋದರರೇ, ಒಂದೇ ಗುರುಗಳ ಶಿಷ್ಯರೇ, ಅಥವಾ ಯಾರಾದರೂ ಸರಿಯೇ?**

ನೀವು ಹೇಳಿದ ಈ ಮೂರು ರೀತಿಗಳಲ್ಲೂ ಯುಗಳ ಗಾಯನದ ಜೋಡಿಗಳಿವೆ. ಈಗ ಮೊದಲು ಸೋದರರನ್ನೇ ತೆಗೆದುಕೊಳ್ಳೋಣ. ಅಣ್ಣ-ತಮ್ಮಂದಿರೇ ಹಾಡಿದ ಪಕ್ಷದಲ್ಲಿ ಅವರಿಗಿರುವ ಅನುಕೂಲತೆಗಳೆಂದರೆ ಬಾಂಧವ್ಯದ ಸಂಕೋಲೆ, ಒಂದೇ ಮನೆಯಲ್ಲಿ ವಾಸ, ಇದರಿಂದ ಆಗಾಗ್ಗೆ ಸೇರಿ ಸಾಧನೆ ಮಾಡಿಕೊಳ್ಳಬಹುದಾದ ಅವಕಾಶ ಇವುಗಳು ಹೆಚ್ಚಾಗಿರುತ್ತದೆ. ಇದರ ಜೊತೆಗೆ ಮನೆಯಲ್ಲಿ ಹಿರಿಯರ ಕಡಿವಾಣವೂ ಇರುತ್ತದೆ. ಇನ್ನು ನಂತರ, ಒಂದೇ ಗುರುಗಳ ಶಿಷ್ಯರು. ಇದೂ ಒಂದು ಉತ್ತಮ ಜೋಡಿಯೇ. ಏಕೆಂದರೆ ಒಂದೇ ಪಾಠಾಂತರ, ಬಾಣಿ ಇವುಗಳಿಂದಾಗಿ ಒಳ್ಳೆಯ ಹೊಂದಾಣಿಕೆ ಇರುತ್ತದೆ. ಈ ನಿಟ್ಟಿನಲ್ಲಿ ಆಲತ್ತೂರು ಸೊದರರನ್ನು ನೋಡಬಹುದು. ಉಳಿದಂತೆ ಹೇಳುವುದಾದರೆ ಯುಗಳಗಾಯನಕ್ಕೇ ಇಂಥವರೇ ಬೇಕೆಂದೇನೂ ನಿರ್ಬಂಧವಿಲ್ಲ. ಯಾರೋ ಇಬ್ಬರು ಸೇರಿ ಹಾಡಬಹುದು. ಆದರೆ ಅದಕ್ಕೆ ಕೊಂಚ ತೊಂದರೆಗಳಿವೆ. ಇಬ್ಬರದೂ ಬೇರೆ ಬೇರೆ ಪಾಠಾಂತರವಿದ್ದಲ್ಲಿ ಹಾಡಿಕೆಯೂ ಭಿನ್ನ ಭಿನ್ನವಾಗಿ ಬಿಡುತ್ತದೆ.

ಆಗ ಮೇಲೆ ಹೇಳಿದ ಇಬ್ಬರು ಜೋಡಿಗಳಿಗಿಂತ ಇವರಿಗೆ ಸಾಧನೆ, ಪರಿಶ್ರಮಗಳು ಹೆಚ್ಚಿಗೆ ಬೇಕಾಗುತ್ತದೆ. ಸತತ ಸಾಧನೆ ಚಿಂತನೆಗಳನ್ನು ಒಟ್ಟಿಗೆ ಸೇರಿ ಮಾಡಿಕೊಂಡರೆ ಯಾರಾದರೂ ಇಬ್ಬರು ಹಾಡ ಬಹುದು. ಇನ್ನೊಂದು ನೀವು ಹೇಳಿದ ಜೋಡಿ ಎಂದರೆ ಗಂಡಸು-ಹೆಂಗಸು ಸೇರಿ ಹಾಡುವುದು. ಇದು ಸ್ವಲ್ಪ ಕ್ಲಿಷ್ಟಕರ ವಾದದ್ದು. ಇಲ್ಲಿ ಬರುವ ಬಹುಮುಖ್ಯ ತಾಪತ್ರಯವೆಂದರೆ ಶೃತಿಯದು. ಯಾರಾದರು ಒಬ್ಬರು ಇಲ್ಲಿ ಕಂಠವನ್ನು ಏರಿಸಬೇಕು ಇಲ್ಲವೇ ಇಳಿಸಬೇಕು.

***ತನಿಯಾಗಿ ಹಾಡುತ್ತಿದ್ದವನು ಜೊತೆಯಲ್ಲಿ ಹಾಡುವ ಅಥವಾ ಜೊತೆಯಲ್ಲಿ ಹಾಡುತ್ತಿದ್ದವನು ತನಿಯಾಗಿ ಹಾಡುವ ಸಂಧರ್ಭ ಬಂದಾಗ ಏನು ತೊಂದರೆಗಳಾಗಬಹುದು? ಅದನ್ನು ಮೀರುವುದು ಹೇಗೆ?***

ನೀವು ಹೇಳಿದ ಇವೆರಡೂ ರೀತಿಯವು ಬಹಳ ಕಷ್ಟಕರವಾದದ್ದೇ ಸರಿ. ಅದರಲ್ಲಿ ತನಿಯಾಗಿ ಹಾಡುತ್ತಿದ್ದವನು ಜೊತೆಯಲ್ಲಿ ಹಾಡಬೇಕಾದರೆ ಅನುಸರಣೆ, ಅಭ್ಯಾಸಗಳಿಂದ ಪಳಗಬಹುದು. ಆದರೆ ಜೊತೆಯಲ್ಲಿ ಹಾಡುತ್ತಿದ್ದವನು ಪ್ರತ್ಯೇಕವಾಗಿ ಹಾಡುವ ಪ್ರಸಂಗ ಬಂದರೆ ಬಹಳ ಕಷ್ಟ. ಏಕೆಂದರೆ ಬಹು ಕಾಲದ ಒಟ್ಟಿಗಿನ ಸಂಬಂಧದಿಂದಾಗಿ ತಿಳಿಯದ ಒಂದು ರೀತಿಯ ಹೃದಯದ ಬೆಸುಗೆ, ಸಾಹಚರ್ಯೆ, ಅವಿನಾಭಾವ ಸಂಬಂಧ ಇತ್ಯಾದಿಗಳಿಗೆ ಸಿಕ್ಕಿರುತ್ತೇವೆ. ಈಗ ನನ್ನನ್ನೇ ತೆಗೆದುಕೊಳ್ಳಿ, ನನ್ನ ತಮ್ಮನ ಅಕಾಲಿಕ ಮರಣದ ನಂತರ ಹಾಡಲು ಹೋದಾಗಲೆಲ್ಲಾ ಅವನ ನೆನಪೇ, ಇದರಿಂದ ಹೊರಬರಲು ಬಹಳ ಕಾಲ ಹಿಡಿಯಿತು ನನಗೆ. ಅವನು ಬದುಕಿದ್ದಾಗಲೂ ರೇಡಿಯೋದಲ್ಲಿ ಮಾತ್ರ ಪ್ರತ್ಯೇಕ ಕಾರ್ಯಕ್ರಮಗಳನ್ನು ನೀಡುತ್ತಿದ್ದೆವು. ಆಗ ಸಹ ನಮಗೆ ಏನೋ ಕಳೆದುಕೊಂಡಂತಾಗುತ್ತಿತ್ತು. ಆದರೆ ಈಗ ವಿಧಿಯಿಲ್ಲವಲ್ಲ....

***ನಿಮ್ಮ ಮಾರ್ಗದರ್ಶನದಲ್ಲಿ ತಯಾರಾದ 'ಯುಗಳಗಾಯನ' ಜೋಡಿಗಳೇನಾದರೂ ಇವೆಯೇ?***

ಇಲ್ಲ. ಆದರೆ ಈ ರೀತಿ ಒಂದು ಜೋಡಿಗೆ ಪಾಠ ಹೇಳಬೇಕೆನ್ನುವ ಅಭಿಲಾಷೆಯಂತೂ ಇದೆ. ಆಸಕ್ತರೇನಾದರೂ ಬಂದರೆ ಖಂಡಿತ ಇದರತ್ತ ಗಮನ ಹರಿಸುತ್ತೇನೆ.

***ಇಷ್ಟೆಲ್ಲಾ ಸಂದರ್ಶನ ನಡೆದದ್ದು ಅವರು ಕಾರ್ಯಕ್ರಮಕ್ಕಾಗಿ ಬಂದು ತಂಗಿದ್ದ ಬೆಂಗಳೂರಿನ ಹೋಟೆಲೊಂದ ರಲ್ಲಿ. ಹೀಗಾಗಿಯೋ ಏನೋ ನಂತರ ಅವರ ಮಾತು ಮಸಾಲೆದೋಸೆಯತ್ತ ತಿರುಗಿತು. ನನ್ನ ಮುತ್ತಾತ ಚಿಂತಲಪಲ್ಲಿ ವೆಂಕಟರಾಯರು ತಾವು ಸಾಯುವ ಹಿಂದಿನ ರಾತ್ರಿ ಇವರ ಹತ್ತಿರ ದೋಸೆ ತಿನ್ನುವ ಅಭಿಲಾಷ ವ್ಯಕ್ತಪಡಿಸಿದ್ದು; ಆ ಸರಿ ಹೊತ್ತಿನಲ್ಲಿ ಇವರು ತಲಾಷ್ ಮಾಡಿ ದೋಸೆ ಕಟ್ಟಿಸಿ ತಂದದ್ದು... ಹೀಗೆ ಸಂಗೀತಗಾರರಿಗೂ ಮತ್ತು ಮಸಾಲೆ ದೋಸೆಗೂ ಯಾವುದೋ ಒಂದು ವಿಚಿತ್ರವಾದ ನಂಟು ಇದೆಯೆನ್ನುವ ಥಿಯರಿಯನ್ನು ಮುಂದಿಟ್ಟರು ವೆಂಕಟೇಶಾಚಾರ್ಯರು.***

# ಸಂಗೀತ ರಚನೆಗಳ ಛಂದೋವಿಚಾರ



## ಡಾ।। ಶ್ರೀಕಾಂತ್ ಕೃ. ಮೂರ್ತಿ

ಸಂಗೀತದಲ್ಲಿ ಬಳಕೆಯಲ್ಲಿರುವ ರಚನೆಗಳನ್ನು ಗಮನಿಸಿ ನೋಡಿದಾಗ ಅವುಗಳಲ್ಲಿ ಒಂದು ಶಿಸ್ತು ಹಾಗು ಕ್ರಮಬದ್ಧ ಓಟ ಇರುವುದು ಕಾಣುವುದು. ಸಾಹಿತ್ಯದಲ್ಲಿ ಛಂದಸ್ಸು ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾದ ಪಾತ್ರವನ್ನು ಸಂಗೀತ ರಚನೆಗಳಲ್ಲಿ ಛಂದಸ್ಸು ವಹಿಸುತ್ತದೆ. ಇವೆರಡರ ಪ್ರೇರಣೆ ಮೂಲತಃ ಒಂದೇ ಆಗಿರುವುದರಿಂದಲೂ ಹಾಗೂ ಕಾವ್ಯಗಳನ್ನು ಸಂಗೀತಕ್ಕೆ ಅಳವಡಿಸಿ ಗಮಕವಾಚನ ಮಾಡುವುದರಿಂದಲೂ ಇವೆರಡರ ನಂಟು ಸ್ಪಷ್ಟವಾಗುತ್ತದೆ. ಕವಲೊಡೆದ ಸಂಗೀತ ಕಲೆಯಲ್ಲಿ ಕಾಲ ಕ್ರಮೇಣ ತನ್ನದೇ ಆದ ನಿಯಮಗಳು ಜಾರಿಗೆ ಬಂದುವು. ಈ ನಿಯಮಗಳನ್ನು ಸ್ಪಷ್ಟೀಕರಿಸುವ ಸಲುವಾಗಿ ಸೂತ್ರಗಳ ರೂಪದಲ್ಲಿ ಕೆಲವು ಕಂದ ಪದ್ಯಗಳನ್ನು ಸಂಕೇತಿಯಲ್ಲಿ ರಚಿಸಲಾಗಿತ್ತು. ಈ ಕಂದಗಳನ್ನು ಮೂಲದಲ್ಲಿ ಕೊಟ್ಟು ಅವುಗಳ ವಿವರಣೆಯನ್ನು ಸವಿಸ್ತಾರವಾಗಿ ಸಂಕೇತಿ ಮೂಲದಿಂದ ಕನ್ನಡೀಕರಿಸಿ ಕೊಡುವುದೇ ಈ ಲೇಖನದ ಉದ್ದೇಶ. ಇದರಿಂದ ಈಗಿನ ವಾಗ್ಗೇಯ ಕಾರರು ಉಪಯೋಗ ಪಡೆದುಕೊಳ್ಳುವುದರಲ್ಲಿ ಲೇಖನದ ಸಾರ್ಥಕ್ಯ ಇರುವುದು.

ಸಂಪ್ರದಾಯದಂತೆ ಮೊದಲು ದೇವತಾ ಸ್ತುತಿ. ಸಂಗೀತ ಪ್ರಶಂಸೆ ಮತ್ತು ಗುರುಸ್ತುತಿಗಳಿವೆ.

**ಗಣಪತಿ ಸ್ತುತಿ**

ಲಂಬೋದರ ಶುಭಕರ ಜಗ
ದಂಬಾಸುತ ಸಕಲ ವಿಘ್ನಮವಿಯಕ್ಕಾ ಹೇ।
ರಂಬಾ ಉಂದೆ ಕರತ್ತೆ ಕ
ರುಂಬಾ ಪೋಲಿಂದ ಕೃತಿ ಕು ರುಚಿ ನೀಡಕ್ಕಾ।।೧।।

ಹೇಗಣನಾಥನೆ ಸಕಲ ವಿಘ್ನಗಳನ್ನು ಹೋಗಲಾಡಿಸು. ಆ ನಿನ್ನ ಕರದಲ್ಲಿರುವ ಕಬ್ಬಿನ ಜಿಲ್ಲೆಯ ಸವಿಯನ್ನು ಈ ನನ್ನ ರಚನೆಗೆ ನೀಡು.

**ಸರಸ್ವತಿ ಸ್ತುತಿ**

ವಾಣೀ ಮಂಜುಳ ವೀಣಾ
ಪಾಣೀ ಕಲ್ಯಾಣಿ ಎನ್ನ ಪಶ್ಲಂಟೇ ಕೈ।
ತೂಣಿ ಸದಾನಲ್ಲೀ ವಳಿ
ಕಾಣಿಪಿ ಉಂದೆ ಕೃಪಕಾಹ ಕಾವಾಂಡ್ರಾಣಿ ।।೨।।

ವಾಣೀ, ವೀಣೆಯನ್ನು ಧರಿಸಿರುವ ಕಲ್ಯಾಣಿ, ನಿನ್ನ ಮಗುವೆಂದು ನನ್ನನ್ನು ತಿಳಿದು ನನ್ನ ಕೈಪಿಡಿದು ಸನ್ಮಾರ್ಗವನ್ನು ತೋರು. ನಿನ್ನ ಕೃಪೆಗಾಗಿ ಕಾಯುತ್ತಲಿರುವೆ.

**ಸಂಗೀತ ಪ್ರಶಂಸೆ**

ಮತಿಯುಳ್ಳುಧೇವರಿರಿತಿ
ಶ್ರುತಿಲಯಮೂ ಪಿಂತಿ ರೀತಿ ಸೋಲಾದ್ದುಡಿ ಸತ್ ।
ಕೃತಿಪಾಡರವನು ಕ★ಂದೆಜ
ಗತಿಯುಳ್ಳಾನುಸರಿಸಾಟಿ ಕಾಣಿಪಿಯಂದಾ ।।೩।।

ಧ್ಯಾನದಲ್ಲಿ ದೇವರನ್ನಿರಿಸಿ ಶ್ರುತಿಲಯ ಹಾಗೂ ಹಿಂದಿನ ಸಂಪ್ರದಾಯಕ್ಕೆ ಧಕ್ಕೆ ಬಾರದಂತೆ ಒಳ್ಳೆಯ ಕೃತಿಯನ್ನು ಹಾಡುವ ಓರ್ವನಿಗೆ ಯಾವ ಜಗತ್ತಿನಲ್ಲಾದರೂ ಸರಿಸಾಟಿ ಉಂಟೇ!

ಓ ದಾನು ತಪಸ್ಸಣ್ಣುಮು
ಓದಿನ ವೇದಂಗಳಣ್ಣು ಮೊರ್ಕಾಲೂ ಶಿ- ।

ಕ್ಕಾದ ಚತುರ್ವರ್ಗ ಫಲಮು
ನಾದೋಪಾಸನಯ ಪಣ್ಣೆ ನಾಕ* ಟುಕಂದೇ ॥೪॥

ಯಾವ ದಾನ ತಪಸ್ಸುಗಳಿಂದಲೂ ವೇದಗಳ ಅಧ್ಯಯನದಿಂದಲೂ ಸಿಕ್ಕದಂತಹ ಚತುರ್ವರ್ಗ ಫಲವು ( ಧರ್ಮ, ಅರ್ಥ, ಕಾಮ, ಮೋಕ್ಷ) ನಾದೋಪಾಸನೆಯಿಂದ ಸುಲಭವಾಗಿ ಕೈ ಗೆಟುಕುವುದು.

**ಗುರುಸ್ತುತಿ :** ನಳಿನತ್ತ ಅರಳಿಯರ ರವಿ
ವಳಿಪೋಲೆಂದೆ ಮನಸರಳ ವಳಿಕಾಟಿನಿಲಾ।
ವಳಿಯತ್ಥಾ ಪ್ರೇಮ ಸುಧೆಯ
ತೂಳಯರ ತಾಯಾಡೆಪಾದು ತೂಣಿ ಭಜಿಯಣೀ॥೫॥

''ಕಮಲವನ್ನು ಅರಳಿಸುವ ರವಿಕಾಂತಿಯಂತೆ ಬೆಳಕನ್ನು ಜೀರಿ ನನ್ನ ಮನಸ್ಸಿನ ವಿಕಾಸಕ್ಕೆ ಕಾರಣವಾಗಿ, ಚಂದ್ರ ಪ್ರಭೆಗೆ ಸಮಾನವಾದ ಪ್ರೇಮ ವಾತ್ಸಲ್ಯ ಸುಧೆಯನ್ನು ಚೆಲ್ಲಿದ ನನ್ನ ಗುರು ಹಾಗು ತಾಯಿಯ ಪಾದಗಳನ್ನು ಮುಟ್ಟಿ ನಮಸ್ಕರಿಸುವೆನು''

**ಪ್ರಾಸ :** ನೇರ್ಪಡ ಮುದಲಾಸ್ವರಂಗ
ಳೇರ್ಪಡ ನಡುವುಳ್ಳೆ ನಿಂಡ ವೆಂಜನಮೂತಾಂ।
ಮಾರ್ಪೋಣ್ದುಮಿಲ್ಲಾದೆಯೆ
ತೋರ್ಪಡತತ್ಪ್ರಾಸ ಮ್ಮಂಟು ಟೊಲ್ಲಪಡಂದೇ ॥೬॥

ಕೃತಿಯ ಪಾದಗಳಲ್ಲಿನ ಮೊದಲೆರಡು ಸ್ವರಗಳ ಮಧ್ಯೆ ಬರುವ ವ್ಯಂಜನ ಯಾವ ಮಾರ್ಪಾಡು ಇಲ್ಲದೆ ಬರುವುದೇ ದ್ವಿತಿಯಾಕ್ಷರ ಪ್ರಾಸ.

**ಉದಾ॥** ಸಿರಿ ನಿನಗುಂಟೆಂದು ಗರ್ವಿಸಲಿ ಬೇಡ
ಸಿರಿ ಎನಗಿಲ್ಲೆಂದು ಮುನಿದು ನೋಡಲಿ ಬೇಡ
ಹರಿಯೆ ನಿನ್ನಂಥ ಒಡೆಯರು ಎನಗುಂಟು
ಅರುಹೋ ನಿನ್ನೊಡೆಯರ ಅಚಲಾನಂದ ವಿಠಲ ॥ (ಅಚಲಾನಂದ ವಿಠಲ, ೯-ನೇ ಶತಮಾನ)

ಓಡಿಬಾರಯ್ಯ ವೈಂಕುಟಪತಿ ನಿನ್ನ
ನೋಡುವೆ ಮನದಣಿಯ ॥ (ಪುರಂದರದಾಸರು)

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಆದಿಮ ಸ್ವರದ ಮಾತ್ರಾಕಾಲ ವ್ಯತ್ಯಾಸವಾಗಬಾರದು ಎಂದರೆ 'ಓಡಿ' ಎಂಬ ಪದಕ್ಕೆ 'ಆಡಿ' ಪ್ರಾಸವಾಗುವುದಿಲ್ಲ ಹಾಗೆ 'ಹರಿ'ಗೆ 'ನಾರಿ' ಪ್ರಾಸವಾಗುವುದಿಲ್ಲ.

ಪ್ರಾಸಾಕ್ಷರ ಸಂಯುಕ್ತಾಕ್ಷರ (ಒತ್ತಕ್ಷರ) ವಾದರೆ ಅದು ಹಾಗೆಯೆ ಬದಲಾಗದೆ ಮುಂದಿನ ಪಾದದಲ್ಲಿ ಬರಬೇಕು.

**ಉದಾ॥** ಶ್ರೀ ತ್ಯಾಗರಾಜಸ್ಯ ಭಕ್ತೋ ಭವಾಮಿ।
ಕಾತ್ಯಾಯಿನೀ ಮೋಹಿತ ಸ್ವರೂಪಸ್ಯ॥ (ರುದ್ರಪ್ರಿಯ, ಮಿಶ್ರಚಾಪು, ಮುತ್ತುಸ್ವಾಮಿ ದೀಕ್ಷಿತರು)
ಧರ್ಮಸಂವರ್ಧನೀ ದನುಜಸಂಮರ್ದನೀ ।
ನಿರ್ಮಲ ಹೃದಯ ನಿವಾಸಿನೀ। (ಮಧ್ಯಮಾವತಿ, ರೂಪಕ, ದೀಕ್ಷಿತರು)

ಆದಿಸ್ವರ ಅನುಸ್ವಾರಯುಕ್ತವಾಗಿದ್ದರೆ ಮುಂದಿನ ಪಾದದಲ್ಲೂ ಹಾಗೇ ಇರಬೇಕು.

**ಉದಾ॥** ಎಂತರಾನಿತನಕೆಂತಪೋನಿ ನೀ
ಚೆಂತ ವಿಡುವ ಜಾಲ। (ಹರಿಕಾಂಬೋಧಿ, ಆದಿ, ತ್ಯಾಗರಾಜರು)

'ಎಂತ' 'ಚೆಂತ' ಈ ಪದಗಳನ್ನು 'ಎನ್ತ' 'ಚೆನ್ತ' ಎಂದು ಬರೆದು ಸಂಯುಕ್ತಾಕ್ಷರಗಳಾಗಿ ಭಾವಿಸಿರುವುದೇ ಇದರ ಮಹತ್ವ.

ಅಲ್ಪಮಹಾಪ್ರಾಣಂಗಳ
ಕಲ್ಪಿಯರಪ್ರಾಸತುಳ್ಳೆ ಕಲವರದರಿದೇ।
ತಲ್ಪು ಕ ಡಾದ್ದುಡಿ ಮೇಲ್ಡಡೆ
ನಿಲ್ಪಿಯರಸ್ವರಮುವೋರೆ ನಿಲುವ ತಳೆಯಲಾ॥೭॥

ಪ್ರಾಸದಲ್ಲಿ ಅಪರೂಪವಾಗಿ ಅಲ್ಪಪ್ರಾಣಕ್ಕೆ ಮಹಾಪ್ರಾಣವು ತದ್ವಿರುದ್ಧವಾಗಿಯೂ ಬರಬಹುದು. ಕಾವ್ಯದಲ್ಲಿ ಇದಕ್ಕೆ ಮಿಶ್ರಪ್ರಾಸ ಎನ್ನುವರು.

**ಉದಾ॥** ಬೋಧರೂಪಿಣಿ ನಿರಂಜನಿ ಭುವನೇಶ ದುರಿತ ಭಂಜನಿ
ಪಾದಜ ವಿಶ್ವವಿಲಾಸಿನಿ। ಪಂಚನದೀಶೋಲ್ಲಾಸಿನಿ।
ವೇದಶಾಸ್ತ್ರ ವಿಶ್ವಾಸಿನಿ। ವಿಧಿಹರಿಹಯ ಪ್ರಕಾಶಿನಿ॥
(ಧರ್ಮಸಂವರ್ಧನೀ' ಮಧ್ಯಮಾವತಿ, ದೀಕ್ಷಿತರು)

ಪ್ರಾಸಾಕ್ಷರದ ಮೇಲಿರುವ ಸ್ವರ ಯಾವುದಾದರು ಆಗಿರಬಹುದು. ಅವುಗಳನ್ನು ಬದಲಿಸುವುದರಿಂದ ಶರ್ಯೆ ಅಥವಾ ಪ್ರಾಸ ಕೆಡುವುದಿಲ್ಲ.

**ಉದಾ॥** ಬೃಹದಂಬಾ ಮದಂಬಾ ಜಯತಿ........
ಮಹಾ‌ದೇವಯುವತೀ ಭಾನುಮತೀ........... (ಭಾನುಮತಿ, ಆದಿ, ದೀಕ್ಷಿತರು)

ನಿಯಮ ಹೀಗಿದ್ದರೂ ವ್ಯವಹಾರದಲ್ಲಿ ಮೋದಲು ಸ್ವರ ಹ್ರಸ್ವ ಆಗಿದ್ದು ಪ್ರಾಸಾಕ್ಷರದ ಮೇಲಿನ ಸ್ವರ ದೀರ್ಘ (ಗುರು)ವಾಗಿದ್ದಲ್ಲಿ ಸಾಮಾನ್ಯವಾಗಿ ಎಲ್ಲಾ ಪಾದಗಳಲ್ಲಿ ಹಾಗೇ ಬರುವುದು. ಸೌಂದರ್ಯಾ ಪೇಕ್ಷೆಯಿಂದಲೂ ಹಾಗೂ ಲಯದ ಸೌಲಭ್ಯಕ್ಕಾಗಿಯೂ ಇದು ಹಾಗೇ ಬರುವುದು.

**ಉದಾ॥** ಪರಾಙ್ಮುಖಮೇಲನಮ್ಮ
ಪರಾಧೀನ ಪತಿತನಾ ಪೃ
ನಿರಾದರಮು ನೀವೇ ಜೇಸಿತೇ......... (ಜಿ. ಎನ್.ಬಿ., ಕಾನಡ, ಆದಿ)

(ಮುಂದುವರಿಯುವುದು)

☐ ಈ ಗುರುತಿನ ಒಳಗಿರುವ ಅಕ್ಷರಗಳನ್ನು ಉಚ್ಚರಿಸುವಾಗ ಉಕಾರವನ್ನು ಪೂರ್ತಿ ಉಚ್ಚರಿಸದೆ ಅರ್ಧ ಉಕಾರವನ್ನು ಮಾತ್ರ (ತಮಿಳು ಹಿಂದಿ ಭಾಷೆಗಳಲ್ಲಿರುವಂತೆ ಹಾಗು ಕೃ ಎಂಬ ಅಕ್ಷರದಲ್ಲಿರುವಂತೆ) ಉಚ್ಚರಿಸಬೇಕು.

*ಈ ಚಿಹ್ನೆ ಕೊಟ್ಟಿರುವ ಅಕ್ಷರಗಳ ಮೇಲಿನ ಅಕಾರವನ್ನು ಸಲ್ಪ ನಾಲಿಗೆಯನ್ನು ಅಂಗುಳಿನ ಕಡೆ [palate] ಎತ್ತಿ ಉಚ್ಚರಿಸಬೇಕು. ಉದಾಹರಣೆಗೆ ಪದ್ಮ ಎಂಬುದಲ್ಲಿ ಪಕಾರದ ಮೇಲಿರುವ ಅಕಾರದಂತೆ ಹಾಗು ಕನ್ನಡದಲ್ಲಿ ತಂದೆ [Z brought] ಎಂಬುದರಲ್ಲಿ ತಕಾರದ ಮೇಲಿರುವ ಅಕಾರ

**ಹಂಸಧ್ವನಿ ಕ್ರಿಯೇಷನ್ಸ್ (ರಿ), ಬೆಂಗಳೂರು :** ''ಹರಿದಾಸ ನಮನ'' ಉದ್ಘಾಟನಾ ಸಮಾರಂಭ. ಸ್ಥಳ: ಶ್ರೀ ಜಯರಾಮ ಸೇವಾ ಮಂಡಳಿ, 8ನೇ ಬ್ಲಾಕ್, ಜಯನಗರ, ಬೆಂಗಳೂರು. ದಿನಾಂಕ 18-3-2000 ಸಂಜೆ 6 ಗಂಟೆಗೆ. ಶ್ರೀ ವೈ. ಕೆ. ಮುದ್ದುಕೃಷ್ಣ - ಉದ್ಘಾಟನೆ; ಪ್ರೊ॥ ಬಿ.ಕೆ. ಚಂದ್ರಶೇಖರ್.- ಮುಖ್ಯ ಅತಿಥಿ; ಸಂಗೀತ ಕಲಾನಿಧಿ **ಆರ್. ಕೆ. ಶ್ರೀಕಂಠನ್ ಮತ್ತು ವಿ॥ ಆರ್. ಎಸ್. ರಮಾಕಾಂತ್ ವೃಂದದವರಿಂದ** ಗಾಯನ.

**ಎಂ. ಇ. ಎಸ್. ಕಲಾವೇದಿ :** ದಿನಾಂಕ 17-3-2000 ಶುಕ್ರವಾರ ಸಂಜೆ 6.30ಕ್ಕೆ ವಿ॥ ಬಿ. ಕೆ. ಅನಂತರಾಂ ಮತ್ತು ಮಾಸ್ಟರ್ ಅಮಿತ್ ನಾಡಿಗ್ ರವರ ದ್ವಂದ್ವ ಕೊಳಲು ವಾದನ. ಪಿಟೀಲು ವಿದುಷಿ ನಳಿನಾ ಮೋಹನ್. ಮೃದಂಗ ವಿ॥ ಸಿ. ಚಲುವರಾಜ್. ಘಟಂ. ವಿ॥ ಎಂ. ಎ . ಕೃಷ್ಣಮೂರ್ತಿ.

# ಅನನ್ಯದಲ್ಲಿ ಶಿವಮೊಗ್ಗೆಯ ಕಲಾವಿದರಿಂದ ಸಂಗೀತೋತ್ಸವ

ಉತ್ತಮ ಅಭಿರುಚಿಯ ಕಾರ್ಯಕ್ರಮಗಳನ್ನು ಯೋಜಿಸುವ ಪ್ರಯತ್ನದಲ್ಲಿ ಜಿಲ್ಲೆಗಳಿಂದ ಆಯ್ದು ಪ್ರತಿಭೆಗಳನ್ನು ಬೆಂಗಳೂರಿನ ಸಂಗೀತ ರಸಿಕರಿಗೆ ಸಮ್ಮುಖಗೊಳಿಸುವುದು ಅನನ್ಯದ ಅಪೇಕ್ಷೆ. ಅದರಂತೆ ದಿನಾಂಕ 4, 5, 6ನೇ ಫೆಬ್ರವರಿಯಲ್ಲಿ ನಡೆದ 'ಶಿವಮೊಗ್ಗ ಸಂಗೀತೋತ್ಸವ'ದಲ್ಲಿ ಮೂರು ಸತ್ವಪೂರ್ಣ ಕಛೇರಿಗಳನ್ನು ಪ್ರಸ್ತುತ ಪಡಿಸಲಾಯಿತು.

ಮೊದಲ ದಿನ ಹಾಡಿದ ಕುಮಾರಿ ಲಕ್ಷ್ಮಿ ತಮ್ಮ ಕಛೇರಿಯನ್ನು ವರ್ಣದಿಂದ ಆರಂಭಿಸಿದರು. ಕಛೇರಿಯ ಮುಖ್ಯ ಭಾಗವಾಗಿ ಬಹುದ್ವಾರಿಯ, ಕಾಂಭೋಜಿ ರಾಗಗಳನ್ನು ಆಯ್ದುಕೊಂಡರು. ತಾನ ತೀರಾ ಮಿತವಾಗಿತ್ತು. ಏಳು ಅಕ್ಷರಗಳ ಪದಗರ್ಭವಿದ್ದುದರಿಂದ ಬಿಕ್ಕಟ್ಟಾಗಿಯೂ ಇತ್ತು. ವೇದಿಕೆಯಲ್ಲಿ ಹೆಚ್ಚಿನ ಅವಕಾಶ, ಅನುಭವಗಳು ದೊರೆತರೆ ಒಳ್ಳೆಯ ಮಟ್ಟದ ಗಾಯಕಿಯಾಗುವುದರಲ್ಲಿ ಸಂಶಯವಿಲ್ಲ. ಇದೇ ಕಛೇರಿಯಲ್ಲಿ ಪಿಟೀಲು ನುಡಿಸಿದ ಶ್ರೀ ಹೊಸಹಳ್ಳಿ ಸುಬ್ಬರಾವ್‌ರವರ ಕೈಯಲ್ಲಿ ಪರಿಷ್ಕರಣೆ ಇಲ್ಲದಿದ್ದರೂ, ತುಂಬು ನಾದವಿತ್ತು. ಮೃದಂಗ ನುಡಿಸಿದ ಶ್ರಿ ಹೊಸಹಳ್ಳಿ ಎಸ್. ವೆಂಕಟರಮಣರವರ ಬೆರಳಾಡಿಕೆಯ ಕ್ರಮ ಚೆನ್ನಾಗಿತ್ತು. ಆದರೂ ತಮ್ಮ ಅತೀ ಸಾತ್ವಿಕತೆಯನ್ನು ಬಿಟ್ಟು ಝೇಂಕರಿಸಿದ್ದರೆ ಕಛೇರಿ ಇನ್ನೂ ಹುರುಪಾಗಿರುತ್ತಿತ್ತು.

ಉತ್ಸವದ ಎರಡನೆಯ ದಿನ ಹಾಡಿದ ಕು. ಅಶ್ವಿನಿಯ ದೈವದತ್ತವಾದ ಶಾರೀರ ಹಾಡಲೆಂದೇ ಹುಟ್ಟಿರುವಂಥದ್ದು. ಕೃತಿಗಳ ಆಯ್ಕೆಯಲ್ಲಿ ವಾಗ್ಗೇಯಕಾರರ ವೈವಿಧ್ಯ, ರಾಗ ವೈವಿಧ್ಯ, ಸ್ವಲ್ಪ ಮಟ್ಟಿಗೆ ತಾಳ ವೈವಿಧ್ಯವಿತ್ತು. ಮೈಸೂರು ವಾಸುದೇವಾಚಾರ್ಯರ ಪೂರ್ಣಚಂದ್ರಿಕೆ ರಾಗದ ಅಪರೂಪದ ಕೃತಿ 'ನಾರಾಯಣ ನಮೋಸ್ತುತೆ' ಮನೋಜ್ಞವಾಗಿತ್ತು. ಈ ಗಾಯಕಿಗೆ ಅಲ್ಲಲ್ಲಿ ಆತ್ಮ ವಿಶ್ವಾಸದ ಕೊರತೆ ಕಾಣುತ್ತಿತ್ತು. ಇದಕ್ಕೆ ಒಂದೇ ಪರಿಹಾರವೆಂದರೆ ಕಛೇರಿಯ ಮೇಲೆ ಕಛೇರಿ ಮಾಡುವುದು. ಅಂತಹ ಪ್ರೋತ್ಸಾಹಕ್ಕೆ ಬೇಕಾದ ಎಲ್ಲ ಅರ್ಹತೆ ಈ ಯುವ ಕಲಾವಿದೆಗೆ ಇದೆ. ಈ ಕಛೇರಿಗೆ ವೈಲಿನ್ ನುಡಿಸಿದ ಬಾಲಕ ರಘು, ಅಸಾಧ್ಯ ಸಾಧ್ಯತೆಗಳ ಪುಟ್ಟ ಹುಡುಗ. ಈತ ಗಾಯಕಿಯ ಮನೋಧರ್ಮವನ್ನು ನೆರಳಿನಂತೆ ಅನುಸರಿಸಿದ್ದಲ್ಲದೆ, ತನ್ನ ವೈಯಕ್ತಿಕ ಅವಕಾಶಗಳಲ್ಲಿ ಅಸಾಧಾರಣವಾಗಿ ಮಿಂಚಿದ್ದು, ಅಲ್ಲಿದ್ದ ಎಲ್ಲರ ಪ್ರಶಂಸೆ ಗಳಿಸಿತು. ಮೃದಂಗದಲ್ಲಿ ಕಟ್ಟೆ ಸತ್ಯನಾರಾಯಣ ಚೆನ್ನಾಗಿ ನೆರವಾದರು.

ಉತ್ಸವದ ಕೊನೆಯ ದಿನ ವಿದ್ವಾನ್ ಎಚ್. ಎಸ್. ನಾಗರಾಜರವರ ಗಾಯನದಿಂದ ಮತ್ತಷ್ಟು ಸೊಬಗುಗೊಂಡಿತ್ತು. ಕಛೇರಿಯ ಯಶಸ್ಸಿನ ಸಮಪಾಲನ್ನು ಪಡೆದ ಬೆಂಗಳೂರಿನ ಎಚ್. ಎಸ್. ಕೃಷ್ಣ ಮೂರ್ತಿಯವರು ನಾದಲಯ ಸೌಖ್ಯಯುತವಾದ ಮೃದಂಗ ವಾದನದಿಂದ ಅಪೂರ್ವವಾದ ಹೊಂದಾಣಿಕೆಯನ್ನು ಸಾಧಿಸಿದರು. ಕಛೇರಿಯ ಆರಂಭದಿಂದ ರಾಗತಾನ ಪಲ್ಲವಿಗೆ ತೊಡಗುವವರೆಗೆ ಎರಡು ಗಂಟೆಗಳ ಕಾಲ ಎಲ್ಲೂ ಬೇಸರದ ಕ್ಷಣಗಳೇ ಇರಲಿಲ್ಲವೆನ್ನುವುದು ಕಲಾವಿದರ ಉತ್ಸಾಹ ಮತ್ತು ಶ್ರದ್ಧೆಯಿಂದ ಕೂಡಿದ ಸಂಗೀತಕ್ಕೆ ಸಾಕ್ಷಿಯಾಗಿತ್ತು. ತನ್ನೆಲ್ಲ ಬಾಗು ಬಳುಕುಗಳೊಡನೆ ಸರ್ವಾಂಗ ಸುಂದರವಾಗಿ ರೂಪುಗೊಂಡ ರಾಗ ಅಪರೂಪದ 'ಚಂದ್ರಜ್ಯೋತಿ', ನಾಗರಾಜರ ಸಾಮರ್ಥ್ಯವನ್ನು ಸ್ಪಷ್ಟಪಡಿಸಿತು. ಈ ಗಾಯಕರ ತುಂಬುನಾದದ, ಸಂವರಣ ಶಕ್ತಿಯ ಪುಷ್ಟ ಶಾರೀರ ಶ್ರೋತೃಗಳ ಸೌಭಾಗ್ಯ.

ಈ ರಸಾಸ್ವಾದನೆಯಲ್ಲಿ ಏರುಪೇರು ಕಾಣಿಸಿದ್ದು ಪಲ್ಲವಿಗೆ ಪೂರ್ವಭಾವಿಯಾಗಿ ಶಂಕರಾಭರಣದ ರಾಗಾಲಾಪನೆಯನ್ನು ಆರಂಭಿಸಿದಾಗ ವಿಸ್ತಾರವಾದ ರಾಗ, ತಾನ, ಪಲ್ಲವಿಗಳ ಪ್ರಯೋಗ ಒಟ್ಟು ಒಂದು ಘಂಟೆಯನ್ನು ಮೀರಿದರೂ ಸ್ವಾರಸ್ಯ ಸಾಲದಾಯಿತು. ಮೈ ಮನಸುಗಳ ಆಯಾಸ ಕಾಣುತ್ತಿತ್ತು. ಕಲಾವಿದರು ತಮ್ಮ ದೇಹ ಮನಸ್ಸುಗಳನ್ನು ದಂಡಿಸದೆ ಸುಸ್ಥಿತಿಯಲ್ಲಿರಿಸಿಕೊಳ್ಳಬೇಕಾದ ಅಗತ್ಯ ನಿಚ್ಚಳವಾಯಿತು.

ವೈಲಿನ ವಾದಕಿಯಾಗಿ ಜ್ಯೋತ್ಸ್ನಾ ಮಂಜುನಾಥ್‌ಗೆ ಈ ಕಛೇರಿ ಒಂದು ಅನುಭವ. ಗಾಯಕರ ಹಾಡಿಕೆಯನ್ನು ಹೆಚ್ಚಿನ ಗಮನವಿಟ್ಟು ಕೇಳಿದಾಗ ಮಾತ್ರ ಮುಂದಿನದನ್ನು ನಿರೀಕ್ಷಿಸಲು ಸಾಧ್ಯ. ಜ್ಯೋತ್ಸ್ನಾ ಇದನ್ನು ಮನಗಂಡು ಶ್ರದ್ಧೆಯಿಂದ ಅಭ್ಯಾಸ ಮಾಡುವ ಅಗತ್ಯವಿದೆ.

# ಕಛೇರಿಯ ವಿನೂತನ ಅನುಭವ

ಇಂದಿನ ಸಂಗೀತ ಕಛೇರಿಗಳಲ್ಲಿ ಹೆಚ್ಚಿನಂಶ ಕಾಣಬರುವುದು ಯಾವುದೇ ರೀತಿಯ ವೈವಿಧ್ಯವಿಲ್ಲದ ಹೇಳಿದ್ದೇ ಹೇಳುವ ಏಕತಾನತೆ. ಹಾಡುಗಾರಿಕೆ ಜನರಂಜನೆಯೇ ಮುಖ್ಯ ಗುರಿಯಾದಾಗ ಈ ರೀತಿಯ ಗಾಯನ ಸ್ವಾಭಾವಿಕ. ಜನರಂಜನೆಯೊಂದಿಗೆ ವಿದ್ವತ್ಪೂರ್ಣತೆಯೂ ಇರಬೇಕು. ಅದಕ್ಕೊಂದು ಹೊಸ ಮೆರುಗನ್ನು ನೀಡಿ ಹಾಡುವ ಸಾಮರ್ಥ್ಯವನ್ನು ನಮ್ಮ ಕರ್ನಾಟಕದಲ್ಲಿ ರೂಢಿಸಿಕೊಂಡಿರುವ ಕೆಲವೇ ವಿದ್ವಾಂಸರಲ್ಲಿ ಅದರಲ್ಲೂ ಯುವ ಕಲಾವಿದರ ಗುಂಪಿನಲ್ಲಿ ವಿದುಷಿ ಟಿ. ಎಸ್. ಸತ್ಯವತಿಗೆ ಅಗ್ರಸ್ಥಾನ. ಆಕೆಯ ಪ್ರತಿ ಕಾರ್ಯಕ್ರಮದಲ್ಲೂ ಒಂದು ಹೊಸತನ ಇರುತ್ತದೆ. ಇದು ಆಕೆಯ ಕಚೇರಿಯ ವೈಶಿಷ್ಟ್ಯ.

ದಿನಾಂಕ ೨೦.೨.೨೦೦೦ ಭಾನುವಾರ ವಿದ್ವಾನ್ ಕೆ. ಎಸ್. ಕೃಷ್ಣಮೂರ್ತಿ ಉಚಿತ ತಾಳವಾದ್ಯ ಕಲಾ ಕೇಂದ್ರದ ಆಶ್ರಯದಲ್ಲಿ ಶ್ರೀ ಪುರಂದರ-ತ್ಯಾಗರಾಜರ ಆರಾಧನೋತ್ಸವದ ಅಂಗವಾಗಿ ಹಾರ್ಮೋನಿಯಂ ವಿದ್ವಾನ್ ಎ. ಅರ್ಜುನಪ್ಪ ಸ್ಮಾರಕ ದತ್ತಿ ಕಾರ್ಯಕ್ರಮದಡಿಯಲ್ಲಿ ನಡೆದ ವಿದುಷಿ ಟಿ. ಎಸ್. ಸತ್ಯವತಿಯವರ ಗಾಯನದಲ್ಲಿ ಈ ಎಲ್ಲ ಅಂಶಗಳೂ ಕೂಡಿದ್ದು ಒಂದು ವೈವಿಧ್ಯಮಯ ಕಚೇರಿ ಯೆನಿಸಿತು. ಅಂದು ಆಕೆ ಹಾಡಿದ ಅನೇಕ ಕೃತಿಗಳು ಇಂದಿನ ಕಚೇರಿಗಳಲ್ಲಿ ಎಂದೂ ಕೇಳಬರದ ಅಪರೂಪದ ಕೃತಿಗಳು.




ಶ್ರೀಮತಿ ಟಿ. ಎಸ್. ಸತ್ಯವತಿ ಮತ್ತು ವೃಂದ

ಮೈಸೂರು ವಾಸುದೇವಾಚಾರ್ಯರ 'ವಾರಣಾಸ್ಯಂ' ಎಂಬ ವರ್ಣದೊಂದಿಗೆ ಕಚೇರಿ ಆರಂಭ. ಇದುವರೆಗೆ ಈ ವರ್ಣವನ್ನು ಎಲ್ಲೂ ಕೇಳಿದ ನೆನಪಿಲ್ಲ. ಅದಕ್ಕೆ ಒತ್ತಿಕೊಂಡೇ ಸಾರಂಗ ರಾಗದ 'ನೀವಾಡನೇ ಗಾನ', ಶಾಮಾಶಾಸ್ತ್ರಿಗಳ ಆಹರಿ ರಾಗದಲ್ಲಿನ 'ಮಾಯಮ್ಮ.....' ಕೃತಿ. ರಂಜನಿಯಲ್ಲೂ ವಾಸುದೇವಾಚಾರ್ಯರ 'ಪ್ರಣಮಾಮ್ಯಹಂ ಪ್ರಾಣನಾಥ'. ಒಂದೊಂದೂ ಅಪರೂಪದ ರತ್ನಗಳು. ಸಾರಂಗದಲ್ಲಿ ಮಾಧುರ್ಯತೆ, ಆಹಿರಿಯಲ್ಲಿನ ಮಾರ್ದವತೆ, ರಂಜನಿಯಲ್ಲಿ ರಂಜನೀಯತೆ, ಎಲ್ಲಕ್ಕೂ ಮಿಗಿಲಾಗಿ ಮಧ್ಯಮಾವತಿಯಲ್ಲಿನ ಭಾವಪರವಶತೆ. ಮಧ್ಯಮಾವತಿಯ ವಿಸ್ತೃತ ಆಲಾಪನೆಯಲ್ಲಿನ ಸಂಚಾರ ಕ್ರಮಗಳು, ಸ್ವರಸ್ಥಾನಗಳ ಖಚಿತತ್ವ, ಶುದ್ಧವಾದ ಸಾಹಿತ್ಯ ನಿರೂಪಣೆ. 'ಭಾಮಾಮಣೀ ಜಾನಕಿ ಸೌಮಿತ್ರಿ' ಯಲ್ಲಿನ ನೆರವಲ್ ಹಾಗು ಕಲ್ಪನಾ ಸ್ವರಗಳಲ್ಲಿನ ಆಕೆಯ ಮನೋಧರ್ಮ, ವಿದ್ವತ್ತಿನ ಪರಿಪಕ್ವತೆಗೆ ಸಾಕ್ಷಿಯಾಗಿದ್ದವು. ಇದಕ್ಕೆ ಮೆರಗು ನೀಡಿದ್ದು ನಳಿನಾ ಮೋಹನ್‌ರವರ ಪಿಟೀಲು ಸಹಕಾರ. ಉತ್ತಮ ನಾದಾನುಸಂಧಾನದ ಮಾಧುರ್ಯುಕ್ತ ರಾಗ-ಸ್ವರ ನಿರೂಪಣೆ ಮನ ಮಿಡಿಯುವಂತಿತ್ತು. ಪಿ.ಜಿ. ಲಕ್ಷ್ಮಿನಾರಾಯಣ ಅವರ ನಿರಾಡಂಬರ - ಮೃದುಠೇಕಗಳ ಮೃದಂಗವಾದನ - ಅದಕ್ಕೆ ಪೂರಕವಾಗಿ ಕೆ. ಎಸ್. ಕೃಷ್ಣಮೂರ್ತಿ

ಯವರ ಘಟವಾದನ ಗಾನದೊಂದಿಗೆ ಸಂಪೂರ್ಣ ಮಿಳಿತವಾಗಿ ಯಾವುದೇ ಅಬ್ಬರವಿಲ್ಲದ ತನ ಆವರ್ತನ 'ರಾಮಕಥಾಸುಧಾರಸ'ವನ್ನು ಗಾನಸುಧಾರಸವನ್ನಾಗಿ ಪರಿವರ್ತಿಸುವಲ್ಲಿ ಅತ್ಯಂತ ಸಹಕಾರಿಯಾಗಿತ್ತು. ದೇಶ್ ರಾಗದ 'ನಂದತನಯ' ಕೃತಿಯೊಂದಿಗೆ ಕಚೇರಿಗೆ ಮಂಗಳ ಹಾಡಿದರು.

ಅದೇ ದಿನ ಬೆಳಗ್ಗೆ ವಿದ್ವಾಂಸರ ಸಂಗೀತ ಸೇವೆ, ಪಂಚರತ್ನ ಕೃತಿಗಳ ಗೋಷ್ಠಿಗಾಯನದ ನಂತರ ನಡೆದ ವಿದ್ವತ್ಸಭೆಯಲ್ಲಿ ಮೈಸೂರಿನ ಪ್ರಸಿದ್ಧ ಮೃದಂಗ ವಿದ್ವಾಂಸರಾದ ವಿದ್ವಾನ ಪಿ. ಜಿ. ಲಕ್ಷ್ಮಿನಾರಾಯಣ ಅವರಿಗೆ 'ಲಯಭೂಷಣ' ಎಂಬ ಬಿರುದಿನೊಂದಿಗೆ ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು. 'ಒಬ್ಬ ಮೃದಂಗ ವಿದ್ವಾಂಸರಿಂದ ಮತ್ತೊಬ್ಬ ಮೃದಂಗ ವಾದಕ ಸನ್ಮಾನಿಸಲ್ಪಡುವುದು ಆತನ ಜೀವನದ ಒಂದು ಮೈಲಿಗಲ್ಲು. ಇದಕ್ಕಿಂತ ಹಿರಿದಾದ ಸನ್ಮಾನ ಮತ್ತೊಂದಿಲ್ಲ- ಉಳಿದ ಯಾವುದೇ ಸನ್ಮಾನ ಪ್ರಶಸ್ತಿಗಳು ಇದರ ಮುಂದೆ ಗೌಣ' ಎಂದು ತಮ್ಮ ಸನ್ಮಾನದ ನಂತರ ಮಾತನಾಡಿದ ಲಕ್ಷ್ಮಿನಾರಾಯಣ ಅವರು ಅಭಿಪ್ರಾಯಪಟ್ಟರು. ರಾಜ್ಯ ಆರಕ್ಷಕ ಇಲಾಖಾ ಸಾರಿಗೆ ಮತ್ತು ರಸ್ತೆ ಸುರಕ್ಷಣಾ ವಿಭಾಗದ ಆಯುಕ್ತರಾದ ಶ್ರೀ ಕೆ. ಸಿ. ರಾಮಮೂರ್ತಿಯವರು ಮುಖ್ಯ ಅತಿಥಿಗಳಾಗಿ ಆಗಮಿಸಿ ವಿದ್ವಾಂಸರನ್ನು ಸನ್ಮಾನಿಸಿದರು. ಹಿರಿಯ ಕಲಾವಿಮರ್ಶಕ ಪಿ.ಜಿ. ಶ್ರೀನಿವಾಸಮೂರ್ತಿ ಅಭಿನಂದನಾ ಭಾಷಣ ಮಾಡಿದರು.

ಎಂ. ಎ. ಜಯರಾಮರಾವ್.

## ವೀಣಾ ಮಾಧುರ್ಯ ಗಿರಿ - ಎಂ. ಜೆ. ಶ್ರೀನಿವಾಸ ಅಯ್ಯಂಗಾರ್

೧೩-೨-೨೦೦೦ರಂದು ಆರನೆಯ ವರ್ಷದ ಪುರಂದರ-ತ್ಯಾಗರಾಜರ ಆರಾಧನಾ ಮಹೋತ್ಸವವನ್ನು ಆಚರಿಸಿದ ಗಿರಿನಗರ ಸಂಗೀತ ಸಭೆಯು ''ಮೈಸೂರು ಬಾನಿ''ಯ ಪ್ರವರ್ತಕರಲ್ಲಿ ಅಗ್ರಗಣ್ಯರಾದ, ಪೂಜ್ಯರೂ ವೈಣಿಕ ವಿದ್ಯಾ ಪ್ರವೀಣರೂ ಆದ ವಿದ್ವಾನ್ ಎಂ. ಜೆ. ಶ್ರೀನಿವಾಸ ಅಯ್ಯಂಗಾರ್ ಅವರಿಗೆ ಸಭೆಯು ಗೌರವ ಸಲ್ಲಿಸಲು 'ವೀಣಾ ಮಾಧುರ್ಯ ಗಿರಿ' ಎಂಬ ಬಿರುದನ್ನಿತ್ತು ಸಕಲ ಮರ್ಯಾದೆಗಳೊಡನೆ, ಆಕಾಶವಾಣಿಯ ನಿವೃತ್ತ ನಿರ್ದೇಶಕರಾದ ಶ್ರೀಮಾನ್ ಎಸ್. ಕೃಷ್ಣಮೂರ್ತಿ ಅವರ ಅಧ್ಯಕ್ಷತೆಯಲ್ಲಿ ಅಭಿನಂದಿಸಿತು. ಆರು ವರ್ಷಗಳಿಂದಲೂ ತನ್ನ ಪ್ರತಿ ತಿಂಗಳ ಮೊದಲ ಶನಿವಾರದ ಸಂಗೀತ ಕಾರ್ಯಕ್ರಮಗಳಿಂದ ಉದಯೋನ್ಮುಖ ಸಂಗೀತ ಕಲಾವಿದರನ್ನು ಬೆಳಕಿಗೆ ತರುತ್ತಿರುವುದೇ ಅಲ್ಲದೆ ದೇಶದ ಸಂಗೀತ ವಿದ್ವನ್ಮಣಿಗಳ ಕಾರ್ಯಕ್ರಮಗಳನ್ನೂ ಏರ್ಪಡಿಸಿ, ಗೌರವಿಸಿ ಗಿರಿನಗರ ಸಂಗೀತ ಸಭೆ ತನ್ನದೇ ಆದ ರೀತಿಯಲ್ಲಿ ಹೆಸರು ಗಳಿಸಿದೆ.

ಎಸ್. ಆರ್. ಶಿವರಾಮ್




ಶ್ರೀಮಾನ್ ಎಸ್. ಕೃಷ್ಣಮೂರ್ತಿಯವರಿಂದ ಸನ್ಮಾನ

# ರಂಜನಿ ಇನ್‌ಸ್ಟಿಟ್ಯೂಟ್ ಆಫ್ ಮ್ಯೂಸಿಕ್

ದಿನಾಂಕ ೨೯-೧-೨೦೦೦, ಶನಿವಾರದಂದು ಶ್ರೀ ತ್ಯಾಗರಾಜ-ಪುರಂದರ ಆರಾಧನಾ ಮಹೋತ್ಸವದ ಅಂಗವಾಗಿ ಗೋಖಲೆ ಇನ್ಸಿಟ್ಯೂಟ್, ಮಲ್ಲೇಶ್ವರಂನಲ್ಲಿ ಶ್ರೀಮತಿ ರೂಪಾ ಶ್ರೀಧರ್ ರವರು ಏರ್ಪಡಿಸಿದ್ದ ಮಕ್ಕಳ ಗೋಷ್ಠಿಗಾಯನ ಒಂದು ಯಶಸ್ವೀ ಕಾರ್ಯಕ್ರಮ. ಮಕ್ಕಳಿಂದಲೇ, ಮಕ್ಕಳಿಗಾಗಿಯೇ ನಡೆದ ಈ ಗೋಷ್ಠಿಗಾನ ತುಂಬ ಅಚ್ಚುಕಟ್ಟಾಗಿ ನಿರ್ದೇಶಿಸಲ್ಪಟ್ಟಿತ್ತು. ಈ ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ವಿ|| ರಾಜಲಕ್ಷ್ಮೀ ತಿರುನಾರಾಯಣ್‌ರವರು ಆಗಮಿಸಿ ತ್ಯಾಗರಾಜರ ಬಗ್ಗೆ ಮಾತನಾಡಿದರು. ಇದೇ ಸಂದರ್ಭದಲ್ಲಿ ಮಕ್ಕಳಿಂದ ತ್ಯಾಗರಾಜರ ಶ್ರೀ ರಾಮಭಕ್ತಿಯ ಬಗ್ಗೆ ಏಕಾಂಕ ನಾಟಕವನ್ನು ಪ್ರದರ್ಶಿಸಲಾಯಿತು. ಈ ಪ್ರಯತ್ನದಲ್ಲಿ ಯಶಸ್ವಿಯಾದ ಶ್ರೀಮತಿ ರೂಪಾ ಶ್ರೀಧರ್‌ರವರು ಅಭಿನಂದನಾರ್ಹರು.




ಮಕ್ಕಳ ಮಧ್ಯೆ ಹಾಡುತ್ತಿರುವವರು ಶ್ರೀಮತಿ ರೂಪಾಶ್ರೀಧರ್

# ನಾದಜ್ಯೋತಿ ಸಭೆಯ 35ನೇ ವಾರ್ಷಿಕೋತ್ಸವದ ಒಂದು ವರದಿ

ಬೆಂಗಳೂರಿನ ನಾದಜ್ಯೋತಿ ಶ್ರೀ ತ್ಯಾಗರಾಜಸ್ವಾಮಿ ಭಜನಸಭಾ (ರಿ) ಆರ್ಯವೈಶ್ಯ ಸಂಘದ ಸಹಕಾರದೊಡನೆ ತನ್ನ 35ನೇ ವಾರ್ಷಿಕೋತ್ಸವ ಹಾಗೂ ಪುರಂದರದಾಸರ, ತ್ರಿಮೂರ್ತಿಗಳ ಆರಾಧನೋತ್ಸವದಲ್ಲಿ ಎಂಟು ದಿನಗಳ ಕಾಲ ಸಂಗೀತ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. 30-1-2000ರಂದು ಸಂಜೆ 5-30ಕ್ಕೆ ಮಲ್ಲೇಶ್ವರಂ ಕ್ಷೇತ್ರದ ವಿಧಾನ ಸಭಾ ಸದಸ್ಯರಾದ ಶ್ರೀ ಎಂ. ಆರ್. ಸೀತಾರಾಮ್‌ರವರು ಕಾರ್ಯಕ್ರಮಗಳ ಉದ್ಘಾಟನೆ ಹಾಗೂ ಸಂಚಿಕೆಯ ಬಿಡುಗಡೆಯನ್ನು ನೆರವೇರಿಸಿದರು. ಆದಿನ ಆಹ್ವಾನಿತ ವಿದ್ವಾಂಸರು ಸಂಗೀತ ಸೇವೆಯನ್ನು ನಡೆಸಿಕೊಟ್ಟರು.

31-1-2000ದಿಂದ 6-2-2000ರ ವರೆಗೂ ಅವಿರತವಾಗಿ ನಡೆದ ಸಂಗೀತ ಕಾರ್ಯಕ್ರಮಗಳಲ್ಲಿ ನಾಡಿನ ಹೆಸರಾಂತ ವಿದ್ವಾಂಸರುಗಳಾದ ಡಾ|| ಆರ್. ಎನ್. ಶ್ರೀಲತಾ, ಡಿ. ಶಶಿಕಲಾ, ಚಿಂತಲಪಲ್ಲಿ ಚಂದ್ರಶೇಖರ್, ತಿರುಮಲೈ ಸಹೋದರಿಯರು, ಡಿ. ಬಾಲಕೃಷ್ಣ, ಬಳ್ಳಾರಿ ವೆಂಕಟೇಶಾಚಾರ್ ಹಾಗೂ ಮೈಸೂರು ವಿ. ದೇಶಿಕಾಚಾರ್ ರವರುಗಳ ಕಾರ್ಯಕ್ರಮವಿತ್ತು.

6-2-2000ರಂದು ಸಭೆಯ ಸಮಾರೋಪ ಸಮಾರಂಭದಲ್ಲಿ ಕರ್ನಾಟಕ ಸಂಗೀತಕ್ಕೆ ಅಪಾರ ಸೇವೆಯನ್ನು ಸಲ್ಲಿಸಿರುವ ನಾಡಿನ ಹಿರಿಯ ವಿದ್ವನ್ಮಣಿಗಳಾದ ಮೈಸೂರು ವಿ. ದೇಶಿಕಾಚಾರ್ (ಕೊಳಲು),

ಬಳ್ಳಾರಿ ವೆಂಕಟೇಶಾಚಾರ್ (ಗಾಯನ), ಎಲ್. ಭೀಮಾಚಾರ್ (ಮೋರ್ಚಿಂಗ್) ರವರಿಗೆ 'ಕಲಾಜ್ಯೋತಿ' ಪ್ರಶಸ್ತಿಯನ್ನೂ, ಡಾ|| ಆರ್. ಎನ್. ಶ್ರೀಲತಾರವರಿಗೆ 'ನಾದಜ್ಯೋತಿ ಪುರಸ್ಕಾರ'ವನ್ನೂ ನೀಡಿ ಗೌರವಿಸಲಾಯಿತು. ಈ ವಿದ್ವನ್ಮಣಿಗಳಿಗೆ ಸನ್ಮಾನಿಸಿ ಅಭಿನಂದನಾ ಭಾಷಣವನ್ನು ಮಾಡಿದ ಖ್ಯಾತ ನಾಟಕಕಾರ ಮಾ|| ಹಿರಣ್ಣಯ್ಯರವರು ''ಸಂಗೀತ ಪಥದಲ್ಲಿ ಸಾಕಷ್ಟು ಕ್ರಮಿಸಿರುವ ಈ ವಿದ್ವಾಂಸರಿಗೆ ಸನ್ಮಾನವೆನ್ನುವುದು ಮೈಲಿಗಲ್ಲಲ್ಲ. ಏಕೆಂದರೆ ಪ್ರತಿ ಕಲಾವಿದರಿಗೂ ಪ್ರಾರಂಭದಲ್ಲಿ ದೊರಕುವುದು ಅನುಮಾನ, ನಂತರ ಅಪಮಾನ, ನಂತರ ಸನ್ಮಾನ. ಈ ಸನ್ಮಾನದ ವೇಳೆಗೆ ಅವರು ಈ ಪಥದಲ್ಲಿ ಸಾಕಷ್ಟು ಕ್ರಮಿಸಿರುವುದರಿಂದ ಸನ್ಮಾನ ಅವರಿಗೆ ದೊಡ್ಡದಲ್ಲವಾದರೂ ಅವರನ್ನು ಕರೆಸಿ ಸನ್ಮಾನಿಸುವುದು ನಮಗೆ ದೊಡ್ಡ ವಿಷಯ'' ವೆಂದರು.

ಮತ್ತೋರ್ವ ಅತಿಥಿಯಾಗಿದ್ದ ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರಾಗಿದ್ದ ಡಾ|| ಡಿ.ವಿ. ಗುರುದತ್‌ರವರು ಸಭೆಗೆ ಅಗತ್ಯವಾಗಿರುವ ಸರ್ಕಾರದ ನೆರವನ್ನು ದೊರಕಿಸುವ ನಿಟ್ಟಿನಲ್ಲಿ ಸಹಾಯ ಮಾಡುವ ವಾಗ್ದಾನವನ್ನು ನೀಡಿದರೆ, ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾದ ಶ್ರೀ ರಂಗವಿಠಲಾಚಾರ್‌ರವರು ಸಂಗೀತದ ಮಹತ್ವವನ್ನು ಕುರಿತ ಅನೇಕ ಪಾಶ್ಚಿಮಾತ್ಯ




ಸನ್ಮಾನಿತರಾದ ಡಾ. ಆರ್. ಎನ್. ಶ್ರೀಲತಾ, ಶ್ರೀ ಎಲ್. ಭೀಮಾಚಾರ್, ಶ್ರೀ ಪಿ. ದೇಶಾಚಾರ್,
ಬಳ್ಳಾರಿ ಶ್ರೀ ವೆಂಕಟೇಶಾಚಾರ್ ಮತ್ತು ಮುಖ್ಯ ಅತಿಥಿಗಳು

ವಿದ್ವಾಂಸರ ಅಭಿಪ್ರಾಯವನ್ನು ಜನರಿಗೆ ತಿಳಿಸಿಕೊಟ್ಟರು. ಯುವ ಪ್ರತಿಭಾಶೋಧಕ್ಕಾಗಿ ಅನನ್ಯ ಹಾಗು ನಾದಜ್ಯೋತಿ ಸಭೆಯು ಜಂಟಿಯಾಗಿ ನಡೆಸುತ್ತಿರುವ ಕಛೇರಿ ಸ್ಪರ್ಧೆಯಲ್ಲಿ ವಿಜೇತರಾದ ಮಾನಸೀ ಪ್ರಸಾದ್ (ಗಾಯನ), ಬಿ.ಕೆ. ರಘು (ಪಿಟೀಲು), ವಿ. ನಂಜುಂಡಮೂರ್ತಿ (ಮೃದಂಗ), ಎಂ. ಕೆ. ವಾಸವಿ (ಘಟ), ಸಿ. ಎಸ್. ವಿಶ್ವಜಿತ್ (ಪಿಟೀಲು) ಇವರುಗಳು ಯುವೋತ್ಸವ 2000ದ 'ಅನನ್ಯ ಕಲಾ ಪ್ರತಿಭಾ ಪುರಸ್ಕಾರ'ವನ್ನು ಆಹ್ವಾನಿತ ಅತಿಥಿಗಳಿಂದ ಸ್ವೀಕರಿಸಿದರು.

**ಶ್ರೀ ತ್ಯಾಗರಾಜ ಸಂಗೀತ ಸಭಾ ಟ್ರಸ್ಟ್ (ರಿ) ಮತ್ತು ಶ್ರೀ ಮೂಕಾಂಬಿಕಾ ತಾಳವಾದ್ಯ ಸಂಗೀತ ಕಲಾ ಶಾಲಾ :** ಶ್ರೀ ವಾಣಿ ವಿದ್ಯಾಕೇಂದ್ರ, ರಾಜಾಜಿನಗರದಲ್ಲಿ ದಿನಾಂಕ 26-3-2000 ಭಾನುವಾರ ಸಂಜೆ 4 ಗಂಟೆಗೆ **ವಿ|| ಮೈಸೂರು ಎಂ. ನಾಗರಾಜ್ ಮತ್ತು ಡಾ|| ಎಂ. ಮಂಜುನಾಥ್** ರವರಿಂದ ದ್ವಂದ್ವ ಪಿಟೀಲು ವಾದನ. **ವಿ|| ಎ. ವಿ. ಆನಂದ್** - ಮೃದಂಗ. **ವಿದುಷಿ. ಸುಕನ್ಯಾ ರಾಮಗೋಪಾಲ್** - ಘಟಂ.



ಅನನ್ಯ

ಅನನ್ಯ
91/2, 4ನೇ ಮುಖ್ಯ ರಸ್ತೆ
ಮಲ್ಲೇಶ್ವರಂ, ಬೆಂಗಳೂರು - 3

# ANANYA PROGRAMMES FOR MARCH 2000

## ಹೊಂಬಾಳೆ ಪ್ರತಿಭಾರಂಗದ

### ಸಹಭಾಗಿತ್ವದಲ್ಲಿ

ಹೊಂಬಾಳೆ ಐದನೇ ವರ್ಷದ ಹುಟ್ಟುಹಬ್ಬ ಮತ್ತು ಸುಗಮ ಸಂಗೀತದಲ್ಲಿ ಗಣನೀಯ ಸಾಧನೆ ಮಾಡಿದವರಿಗೆ

## ಪ್ರಶಸ್ತಿ ಪ್ರದಾನ ಸಮಾರಂಭ.

ಶ್ರೀ ಎಸ್. ಬಾಲಸುಬ್ರಹ್ಮಣ್ಯ [ಬಾಲಿ] ರವರಿಗೆ 'ಕಲಾಕೋವಿದ' ಪ್ರಶಸ್ತಿ ಪ್ರದಾನ

ಶ್ರೀ ಗರ್ತಿಕೆರೆ ರಾಘಣ್ಣ [ಹೊ. ನ. ರಾಘವೇಂದ್ರ] ರವರಿಗೆ

## 'ಅನನ್ಯ ಕಲಾಭಿಜ್ಞ'' ಪ್ರಶಸ್ತಿ ಪ್ರದಾನ

**ಸ್ಥಳ : ರವೀಂದ್ರ ಕಲಾಕ್ಷೇತ್ರ, ಬೆಂಗಳೂರು, ದಿ : 17-3-2000, ಶುಕ್ರವಾರ ಸಂಜೆ 6.00 ಗಂಟೆಗೆ**

## ಶ್ರೀ ಗರ್ತಿಕೆರೆ ರಾಘಣ್ಣ

ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ಗರ್ತಿಕೆರೆಯಲ್ಲಿ 'ಹಾಡುಹಕ್ಕಿ' ಯೊಂದಿದೆ. ಅದು ತನ್ನ ಬದುಕನ್ನೇ ಹಾಡಾಗಿಸಿಕೊಂಡಿದೆ. ಮಲೆನಾಡ ಪ್ರದೇಶದಲ್ಲಿ, ಕಳೆದ ನಾಲ್ಕು ದಶಕಗಳಿಂದಲೂ ತನ್ನ ಮಧುರ ಕಂಠದ ಮೂಲಕ ಕೇಳುಗರ ಹೃದಯ ತಣಿಸುತ್ತಾ ಬಂದಿದೆ. 'ಹಾಡುವುದು ಅನಿವಾರ್ಯ ಕರ್ಮ ನನಗೆ'' ಎನ್ನುವ ಡಾ|| ಜಿ. ಎಸ್. ಶಿವರುದ್ರಪ್ಪನವರ ಕವನದ ಸಾಲಿಗೆ ಅನ್ವರ್ಥವಾಗುವಂತೆ ಗಾಯನ ಕಾಯಕದಲ್ಲೇ ತನ್ನ ಉಸಿರನ್ನಿರಿಸಿಕೊಂಡಿದೆ.

ಆ 'ಹಾಡುಹಕ್ಕಿ' - ಗರ್ತಿಕೆರೆ ರಾಘಣ್ಣ. ನಮ್ಮೆಲ್ಲರ ಪ್ರೀತಿಯ 'ರಾಘಣ್ಣ'. ಭಾವಗೀತೆ, ಜನಪದಗೀತೆ, ರಂಗಗೀತೆ, ದಾಸರ ಪದಗಳು, ವಚನಗಾಯನ - ಹೀಗೆ ಸುಗಮಸಂಗೀತದ ವಿವಿಧ ಆಯಾಮಗಳ, ಹಲವು ಮಗ್ಗಲುಗಳ ಹಿಡಿತ ಸಾಧಿಸಿ, ಸುಗಮಸಂಗೀತದ ಹರವನ್ನು ವಿಸ್ತೃತಗೊಳಿಸಲು ರಾಘಣ್ಣ ಹೆಣಗಿದ್ದಾರೆ. ಅಸಾಧಾರಣ ಗಾಯನ ಶಕ್ತಿ, ತುಂಬು ಗಂಭೀರ ಕಂಠ, ಯಾವ ತಗ್ಗಿನಿಂದ ಎಂಥ ಎತ್ತರಕ್ಕೂ ರೂಪಗೆಡದೆ ಲೀಲಾಜಾಲವಾಗಿ ಹರಿಯುವ ದನಿಶಕ್ತಿ, ಶ್ರುತಿ-ತಾಳ-ಸ್ವರಗಳ ಕರಾರುವಾಕ್ಕು ಗ್ರಹಿಕೆ, ನಿಖರ ಹಾಗೂ ಸ್ಪಷ್ಟ ಉಚ್ಚಾರ, ಸಾಹಿತ್ಯವನ್ನನುಸರಿಸಿ ಸಾಗುವ ಸ್ವರ-ರಾಗ ಸಂಯೋಜನೆ, ಇವು ರಾಘಣ್ಣನವರ ಗಾಯನದ ವೈಶಿಷ್ಟ್ಯಗಳು.

ಕರ್ನಾಟಕ ಘನ ಸರ್ಕಾರದ ಈ ಹಿರಿಯ ಗಾಯಕನಿಗೆ ರಾಜ್ಯೋತ್ಸವ ಪ್ರಶಸ್ತಿ (1991) ನೀಡಿ ಗೌರವಿಸಿದೆ. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿಯೂ ಸಂದಿದ್ದು ಆ ಪ್ರಶಸ್ತಿಗಳ ಗೌರವ ಹೆಚ್ಚಿದೆ. ಇದೀಗ ಬೆಂಗಳೂರಿನ ಅನನ್ಯ ಸಂಸ್ಥೆಯು ರಾಘಣ್ಣನವರಿಗೆ **'ಅನನ್ಯ ಕಲಾಭಿಜ್ಞ'** ಪ್ರಶಸ್ತಿ ಪ್ರದಾನ ಮಾಡಲು ಹೆಮ್ಮೆ ಪಡುತ್ತದೆ

Published by : ANANYA GML CULTURAL ACADEMY, 91/2, 4th Main, Malleswaram, Bangalore - 560 003. Phone : 3345069. Printed by : Akshara Printers, Basavanagudi, Bangalore - 560 004, Phone : 6524082, 6524897